

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೫೩ ನವೆಂಬರ್ ೨೦೧೭ ಸಂಚಿಕೆ : ೧೧

## ಕನ್ನಡ ರಾಜ್ಯೋತ್ಸವದ ಹಾರ್ದಿಕ ಶುಭಾಶಯಗಳು

ಹೆಸರಾಯಿತು ಕರ್ನಾಟಕ
ಉಸಿರಾಗಲಿ ಕನ್ನಡ,
ಹಸಿಗೋಡೆಯ ಹರಳಿನಂತೆ
ಹುಸಿಹೋಗದ ಕನ್ನಡ

- ಚನ್ನವೀರ ಕಣವಿ



ಹಂಪಿ



ಶೃಂಗೇರಿ



ಮೈಸೂರು ಅರಮನೆ



ಪಟ್ಟದಕಲ್



ಸೋಮನಾಥಪುರ











॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೩ ನವೆಂಬರ್ ೨೦೧೮ ಸಂಚಿಕೆ : ೧೧


ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
**ಹೆಚ್.ವಿ. ವೀರಭದ್ರಯ್ಯ**

ಸಹ ಸಂಪಾದಕರು :
**ಎಚ್.ಎಸ್. ಸಿದ್ಧಗಂಗಪ್ಪ**

ಪತ್ರಿಕಾ ನಿರ್ವಹಣಾ ಸಮಿತಿ :
**ಎಂ. ರೇಣುಕಾರಾಧ್ಯ**
**ಆರ್.ಎಸ್. ಮಲ್ಲೇಶಪ್ಪ**
**ಕೆ.ಬಿ. ಶಿವಶಂಕರಯ್ಯ**

ಪ್ರಕಾಶನ :
**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು :
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು-572 104.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

## ಒಳಪುಟಗಳಲ್ಲಿ .................


೨. ಸಂಪಾದಕೀಯ
೩. ಶ್ರೀವಾಣಿ
೪. ಸಿದ್ಧಲಿಂಗೇಶ್ವರ ವಚನ –
ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫. ಸದ್ಭಾವಯೋಗ – ಶ್ರೀ ಸಿದ್ಧೇಶ್ವರ ಸ್ವಾಮಿಗಳು
೮. ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಈಚಿನ ಶೋಧಗಳು – ಡಾ. ಎಂ.ಜಿ. ನಾಗರಾಜ್
೧೨. 'ಕರ್ನಾಟಕ'ದ ಭವಿಷ್ಯ – 'ಚಿಂತೆ' – 'ಚಿಂತನೆ' – ಡಾ. ಎಂ. ಚಿದಾನಂದಮೂರ್ತಿ
೧೫. ಕನ್ನಡ ನಾಡು-ನುಡಿ – ಟಿ.ಆರ್. ಮಹಾದೇವಯ್ಯ
೧೮. ಸಜ್ಜನಿಕೆಯ ಸಾಕಾರಮೂರ್ತಿ ಶ್ರೀ ಟಿ.ಆರ್. ಮಹಾದೇವಯ್ಯ – ಎಚ್.ಎಸ್. ಸಿದ್ಧಗಂಗಪ್ಪ
೨೩. ನಡೆ-ನುಡಿಯೊಳಗೆ ಮತ್ತೊಂದು ಕಾಣದಂತಿರಬೇಕು – ಸ.ರಾ. ಸುಳಕೂಡೆ
೨೫. ಯೆಲ್ಲೊಸ್ಟೋನ್ ಪಾರ್ಕ್-ಭೂಗರ್ಭದ ಚಮತ್ಕಾರ – ಬಿ.ನಂ. ಚನ್ನಪ್ಪ
೨೯. ಮಹಾನ್ ಸಂತ ಗುರು ಬಸವಣ್ಣನವರು – ಯೋಗೀಶ್ ನಿರ್ವಿಕಲ್ಪ
೩೨. ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳು



ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00

# ನಾಡು-ನುಡಿಯ ಬಗ್ಗೆ ಚಿಂತನೆ

ನವೆಂಬರ್ ರಾಜ್ಯೋತ್ಸವದ ಮಾಸ. ಕನ್ನಡ ರಾಜ್ಯ ಉದಯವಾಗಿ ಕನ್ನಡಿಗರ ಕಲ್ಯಾಣಕ್ಕೆ ಸೇವಾಪಥವನ್ನು ತೆರೆದ ತಿಂಗಳಿದು. ನಮ್ಮನ್ನಾಳುವ ಜನನಾಯಕರು ಜನಕಲ್ಯಾಣ ಮುಖಿಯಾಗಿ ಹಲವು ಹನ್ನೊಂದು ಯೋಜನೆಗಳನ್ನು ರೂಪಿಸಿ ಅವುಗಳನ್ನು ಕ್ರಿಯಾಶೀಲವಾಗಿಸುತ್ತಿರುವುದು ಅಭಿನಂದನೀಯವಾದುದಾಗಿದೆ. ಕನ್ನಡ ನುಡಿಯ ಅಭಿವೃದ್ಧಿಗಾಗಿ ಕನ್ನಡ ಶಾಲೆಗಳನ್ನು, ಬಲವರ್ಧಕಗಳನ್ನಾಗಿಸುವುದು ಅಗತ್ಯ. ಇಂಗ್ಲಿಷ್ ವ್ಯಾಮೋಹದಿಂದ ಮಕ್ಕಳನ್ನು ವಿಮುಖರನ್ನಾಗಿಸುವ, ಮಾತೃಭಾಷೆಯನ್ನು ಪ್ರೀತಿಸುವವರನ್ನಾಗಿಸಬೇಕಾಗಿದೆ. ಮಾತಾಪಿತೃಗಳು, ಪೋಷಕರು, ಶಿಕ್ಷಕರು, ಪತ್ರಿಕೆಯವರು, ಸುದ್ಧಿಮಾಧ್ಯಮಗಳು, ಟಿ.ವಿ. ಗಳು ಈ ವಿಚಾರವನ್ನು ಗಂಭೀರವಾಗಿ ಚಿಂತಿಸುವ ಅಗತ್ಯವಿದೆ.

ನಾವು ಕೇವಲ ನವಂಬರ್ ಕನ್ನಡಿಗರಾದರೆ ಸಾಲದು. ತನು ಕನ್ನಡ, ಮನ ಕನ್ನಡ, ಬಾಳು ಬದುಕೆಲ್ಲ ಕನ್ನಡೀಕರಣವಾಗಬೇಕಾಗಿದೆ. ರಾಜ್ಯೋತ್ಸವ ಸಂದರ್ಭದಲ್ಲಿ ಸರ್ಕಾರ ಕನ್ನಡಕ್ಕಾಗಿ ದುಡಿಯುತ್ತಿರುವ ಪತ್ರಿಕೆಗಳನ್ನು, ಸಾಹಿತಿಗಳನ್ನು, ಸಂಸ್ಥೆಗಳನ್ನು ಪ್ರೋತ್ಸಾಹಿಸಬೇಕು. ಮಠಮಾನ್ಯಗಳು ಮಾಡುತ್ತಿರುವ ಕನ್ನಡ ಸೇವೆಯನ್ನು ಗುರುತಿಸುವುದಾಗಬೇಕು. ಶಾಲಾ ಕಾಲೇಜುಗಳಲ್ಲಿ ಓದುತ್ತಿರುವ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಕನ್ನಡದಲ್ಲಿ ಓದಿ ಬರೆಯುವಂತೆ ಉತ್ತೇಜಿಸಬೇಕು. ಹೀಗೆಂದಾಗ ಇಂಗ್ಲಿಷ್ ಭಾಷೆಯನ್ನು ಅವಗಣಿಸಬೇಕೆಂದೇನೂ ಅಲ್ಲ. ಅದಕ್ಕೆ ಕೊಡಬೇಕಾದ ಸ್ಥಾನಮಾರ್ಗಗಳನ್ನು ಗೌರವಿಸಬೇಕು. 'ಕನ್ನಡದ ಪುಲ್ಲೆನಗೆ ಪಾವನ ಶ್ರೀ ತುಲಸಿ' ಎಂಬ ಕವಿವಾಣಿ ನಮ್ಮದಾಗಬೇಕು. ಜನಪದರ ಕನ್ನಡಕ್ಕೆ ಗಮನ ಕೊಡಬೇಕು.

**'ಸಿದ್ಧಗಂಗಾ'** ಮಾಸಪತ್ರಿಕೆ ಪರಮಪೂಜ್ಯ ಶ್ರೀ ಶ್ರೀಗಳೀರ್ವರ ಆಶೀರ್ವಾದದಿಂದ ಸೇವಾಪಥದಲ್ಲಿ ಮುನ್ನಡೆಯುತ್ತಿದೆ. ಅಭಿಮಾನಿಗಳ, ಚಂದಾದಾರರ, ಜಾಹಿರಾತುದಾರರ ಸಹಕಾರಕ್ಕೆ ವಂದನೆಗಳನ್ನು ಸಲ್ಲಿಸುತ್ತಾ, ಎಲ್ಲರಿಗೂ ರಾಜ್ಯೋತ್ಸವದ ಶುಭಾಶಯಗಳನ್ನು ಕೋರುತ್ತ, ಶ್ರೀ ಸಿದ್ಧಗಂಗಾ ಗುರುಪರಂಪರೆ ಸಕಲ ಸನ್ಮಂಗಳವನ್ನು ಅನುಗ್ರಹಿಸಲಿ ಎಂದು ಹಾರೈಸುತ್ತ, ಮೈಸೂರಿನಲ್ಲಿ ಆಯೋಜಿತವಾಗಿರುವ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿರುವ ಪ್ರೊ. ಚಂದ್ರಶೇಖರ ಪಾಟೀಲರಿಗೆ ಶುಭವನ್ನು ಕೋರುತ್ತದೆ.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
**ಸಂಪಾದಕರು**







# ಪತ್ರಿಕೆಗಳ ಸೇವೆ ಅನುಪಮ

**ಪ**ತ್ರಿಕಾ ವ್ಯವಸಾಯ ಪವಿತ್ರವಾದ ಸೇವೆ. ವರ್ತಮಾನದ ಸಾರ್ವಜನಿಕ ಜೀವನವನ್ನು, ಆಡಳಿತಯಂತ್ರವನ್ನು ಸಾಮಾಜಿಕ ಸೇವೆಯನ್ನು, ರಾಜಕೀಯ ಆಗುಹೋಗುಗಳನ್ನು, ಧಾರ್ಮಿಕ ಸಂಸ್ಥೆಗಳ ನಿಷ್ಕಾಮ ಸೇವೆಯನ್ನು ಪ್ರಚಲಿತ ಸಮಸ್ಯೆಗಳನ್ನು, ಜನಮನಕ್ಕೆ ಮುಟ್ಟಿಸುವ ಮಣಿಹದಲ್ಲಿ ಕ್ರಿಯಾಶೀಲರಾಗಿರುವುದು ಅಭಿನಂದನೀಯ. ಪತ್ರಿಕೆಗಳು ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯಲ್ಲಿ ಸಮರ್ಥ ಪಾತ್ರವಾಡುವ ಜೀವನಾಡಿಗಳು. ಯಾವುದೇ ವ್ಯಕ್ತಿ, ಸಂಸ್ಥೆ ಪಕ್ಷ ನಿಷ್ಠವಾಗದೆ ವಸ್ತುನಿಷ್ಠ ದೃಷ್ಟಿಕೋನದಿಂದ ಸೇವೆ ಸಲ್ಲಿಸುವ ಪತ್ರಿಕೆಗಳು ಎಲ್ಲ ಕಾಲಕ್ಕೂ ಅಗತ್ಯ.

ಪತ್ರಿಕೆಗಳು ಪ್ರಜಾಪ್ರಭುತ್ವದ ನಾಲ್ಕನೆಯ ಅಂಗ. ಲೋಕಸೇವೆಯ ಪ್ರಮುಖ ಕ್ಷೇತ್ರ. ಜನಾಭಿಪ್ರಾಯವನ್ನು ಗ್ರಹಿಸುವ, ಜನಕಲ್ಯಾಣಕ್ಕೆ ಆಡಳಿತಾಂಗವನ್ನು ಅಭಿಮುಖಿಯನ್ನಾಗಿಸುವ ಪತ್ರಿಕೆಗಳು. ಆಧುನಿಕ ಜೀವನದ ಅಂತರಂಗ ಬಹಿರಂಗವನ್ನು ಚಿತ್ರಿಸುತ್ತಾ, ಇತಿಹಾಸ ರಚನೆಗೆ ಸಹಕರಿಸುತ್ತಾ ಉಸಿರಾಡುವ ಅಕ್ಷರದೇಹಿಗಳು. ರಾಜಕೀಯ ಆಕರ್ಷಣೀಯವಾದುದು. ಅಧಿಕಾರಾಕಾಂಕ್ಷೆಯನ್ನು ಪ್ರಚೋದಿಸುವಂತಹುದು. ಜನಸೇವೆಗೆ ನೇರದಾರಿ ತೆರೆದದ್ದು. ಪೂರ್ವಿಕರು ತಮ್ಮ ನಿಷ್ಕಾಮ, ನಿಸ್ವಾರ್ಥ, ಪ್ರಾಮಾಣಿಕ ಪ್ರವೃತ್ತಿಯಿಂದ, ಸರಳ ಜೀವನದಿಂದ, ಅದನ್ನು ಪವಿತ್ರಗೊಳಿಸುತ್ತ ಬರುವಂಥದು, ಆ ಸನ್ಮಾರ್ಗವನ್ನು ಇಂದು ಜನನಾಯಕರು ಅನುಸರಿಸುವುದು ಸೂಕ್ತವೆನಿಸೀತು.

* * *

ಇವತ್ತು ಟಿ.ವಿ. ಎಂಬ ರಾಕ್ಷಸ ಬಂದು ಜನಜೀವನದ ಮೇಲೆ ದುಷ್ಪರಿಣಾಮ ಬೀರಿದೆ. ಒಂದು ಕಾಲಕ್ಕೆ ಟಿ.ವಿ. ಒಂದು ದೊಡ್ಡ ಸಾಧನೆಯಾಗಿತ್ತು. ಜ್ಞಾನಾರ್ಜನೆಗೆ ಅದು ಪೂರಕವಾಗಿತ್ತು. ಇವತ್ತು ಟಿ.ವಿ.ಯ ಮುಂದೆ ಕುಳಿತ ಯುವಜನಾಂಗ ಮುಂದಿನ ಭವಿಷ್ಯವನ್ನು ಯೋಚನೆ ಮಾಡದೆ ವೃಥಾ ಕಾಲವನ್ನು ವ್ಯರ್ಥ ಮಾಡುತ್ತಾರೆ. ಎಲ್ಲಾ ಕೆಟ್ಟ ಚಿತ್ರಗಳು, ಒಂದು ಬಾರಿ ಟಿ.ವಿ. ಹಾಕಿದರೆ, ದೊಡ್ಡ ದೊಡ್ಡ ರಾಜಕಾರಣಿಗಳ ಸಂಭಾಷಣೆ, ಭಾಷಣಗಳು ಪ್ರಸಾರ ಬಹುತೇಕ ಮಾಡುತ್ತಾರೆ. ಆದಷ್ಟು ಮನುಷ್ಯ ಚಾರಿತ್ರ್ಯಶೀಲವನ್ನು ಬೆಳೆಸಿಕೊಳ್ಳಬೇಕಾಗಿರುವಂತಹದು ಮುಖ್ಯ. ಅದು ಮಹಾಸಂಪತ್ತು.

## ಶ್ರೀ ಸಿದ್ಧಲಿಂಗೇಶ್ವರ ವಚನ



***ಕಾಯಗೊಂಡು ಹುಟ್ಟಿಸಿ ಕರಣಾದಿ ಗುಣಂಗಳಿಗೆ ಗುರುಮಾಡಿ***
***ಕಾಡಿಸ್ಯಾಡುವಿರಯ್ಯಾ***
***ಇದು ಕಾರಣ ಎನ್ನಕಾಯದ ಕರಣದ ಗುಣವ ಕಳೆದು***
***ಎನ್ನೊಳ ಹೊರಗೆ ಹಿಡಿದಿಪ್ಪ ಮಾಯಾ ಪ್ರಪಂಚವ ಮಾಣಿಸಿ***
***ನೀವಲ್ಲದೆ ಮತ್ತೇನನರಿಯದಂತೆ***
***ಸಂಸಾರಸುಖವ ನೆನೆಯದಂತೆ ಕರುಣಿಸಯ್ಯಾ***
***ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ***

ಕಾಯಗೊಂಡು – ದೇಹ ಸಾಕಾರಗೊಂಡು, ಹುಟ್ಟಿಸಿ– ಉತ್ಪತ್ತಿವ ಮಾಡಿಸಿ, ಕರಣಾದಿಗುಣಂಗಳಿಗೆ – ಸಕಲ ಕರಣಂಗಳೆಂಬ ತತ್ವಂಗಳಿಗೆ, ಗುರಿಮಾಡಿ– ಕೇಡುಮಾಡಿ, ಕಾಡಿಸ್ಯಾಡುವಿರಿ – ಪೀಡಿಸ್ಯಾಡುವಿರಿ, ಅಯ್ಯಾ – ಎಲೆ ಲಿಂಗವೆ, ಇದು ಕಾರಣ – ಇದು ನಿಮಿತ್ತಾರ್ಥ, ಎನ್ನಕಾಯದ – ಎನ್ನದೇಹದ, ಕರಣದ – ಸಕಲಕರಣಂಗಳ, ಗುಣವ– ವರ್ತನೆಯನು, ಕಳೆದು – ನಷ್ಟವ ಮಾಡಿ, ಎನ್ನೊಳ ಹೊರಗೆ – ಬಾಹ್ಯಾಂತರದಲ್ಲಿ, ಹಿಡಿದಿಪ್ಪ – ಮುಸುಕಿಕೊಂಡಿರುವ, ಮಾಯಾಪ್ರಪಂಚನ – ಅವಿದ್ಯಾ ಪ್ರಪಂಚವನು, ಮಾಣಿಸಿ – ಬಿಡಿಸಿ, ನೀವಲ್ಲದೆ – ಪರಶಿವಲಿಂಗವಲ್ಲದೆ, ಮತ್ತೇನನು ಅರಿಯದಂತೆ – ಮತ್ತೇನನ್ನು ತಿಳಿಯದ ಹಾಗೆ, ಸಂಸಾರ – ಸಕಲ ಸಂಸಾರದ, ಸುಖವ – ಪರಿಣಾಮವನು, ನೆನೆಯದಂತೆ – ಇಚ್ಛೈಸದ ಹಾಗೆ, ಕರುಣಿಸಯ್ಯಾ – ಕೃಪೆಮಾಡಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ.

*(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ|| ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)*

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಭುವನದ ಭಾಗ್ಯವೆ ಮನುಕುಲದ ಮಂಗಳವೆ
ವಿಶ್ವ ವಿಭೂತಿ ಶಿವನಿಧಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕತ್ತಲೆಗೆ ಬೆಳಕನು ಮುಡಿಸುವ ಜ್ಯೋತಿಯೆ
ಶಿಲೆಯ ಶಿಲ್ಪವ ಮಾಳ್ಪ ಶಿವಶಿಲ್ಪಿ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಣಜಿಗನೆಂಬುವನು ಧರಣಿಯ ಮೇಲಿರುವ
ಹರದ ಮಹಾದೇವಶೆಟ್ಟಿಯ ವರ ಕುವರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಣಿಯ ಸೋಲನು ಅರ್ಥಗಾಣಿಯಗೆಲ್ಲ
ಬಲುಜಾಣ ನಮ್ಮ ಬಣಜಿಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬೆವಹಾರ ಕಾಯಕದಿಗಳಿಸಿದ ಧನವನು
ದಾಸೋಹ ಮಣಿಹದಲಿ ಸವೆಸುವನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಂಧುವಾಗಿಹನವನು ಸಕಲ ಶರಣರಿಗೆ
ಸಿಂಧು ಸಿರಿಯಾಗಿ ಬೆರೆದಿಹನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಕಲ ಜೀವರಿಗೆ ಲೇಸನೇ ಬಯಸುವ
ಅಕಳಂಕ ಚರಿತೆಯ ಬಣಜಿಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಬಣಜಿಗಬಂಧುವೆ' ಹಣೆಮಣಿದು ನಮಿಸುವೆ
ಎಣೆಯಿಲ್ಲದ ಸೇವೆಯು ನಿನದಾಯ್ತು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮುನ್ನಡೆದು ನೀನಡೆದು ನಿನ್ನೀ ಸಮಾಜವ
ಇನ್ನೆಂದಿಗು ಕುಂದದೆ ಕುಸಿಯದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಾಲಸೋಲಬೇಡ ಕಾಲಹರಣಬೇಡ
ಬಾಳ್ವವ ಬರಿದಾಗಿ ಕಳೆಬೇಡ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ಸದ್ಭಾವಯೋಗ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಜ್ಞಾನವೆಂಬ ಬೀಜವು ವಿಶಾಲವೃಕ್ಷವಾಗಿ ಬೆಳೆದು ಅನುಭಾವದ ಅಮೃತ ಫಲ ನೀಡಬೇಕಾದರೆ ಧ್ಯಾನವೆಂಬ ಸಾಧನ ಅತ್ಯಂತ ಅವಶ್ಯ. ನಮ್ಮ ಹತ್ತಿರ ಬೀಜವಿದ್ದರೆ ಫಲವಿದ್ದಂತೆ ಅಲ್ಲ. ಆ ಬೀಜದಿಂದ ನಮ್ಮ ಹಸಿವು ಹಿಂಗದು. ಆ ಬೀಜದಲ್ಲಿ ಬೃಹತ್ತಾದ ವೃಕ್ಷವೇ ಹುದುಗಿರಬಹುದು. ಮುಂದೆ ಅದು ನೂರಾರು ಮಧುರ ಫಲಗಳನ್ನೂ ಕೊಡಬಹುದು. ಆದರೆ ನಾವು ಬರೀ ಬೀಜ ಸಂಪಾದಿಸಿದ ಮಾತ್ರಕ್ಕೆ ಫಲವನ್ನು ಪಡೆದಂತಾಗಲಿಲ್ಲ.

ಆ ಬೀಜವನ್ನು ಫಲವತ್ತಾದ ಭೂಮಿಯಲ್ಲಿ ಬಿತ್ತಬೇಕು. ಅದಕ್ಕೆ ನೀರು, ಗೊಬ್ಬರ ಕೊಟ್ಟು ರಕ್ಷಿಸಬೇಕು. ಅದು ಬೆಳೆಯಲಿಕ್ಕೆ ಒಂದಿಷ್ಟು ಕಾಲಾವಕಾಶ ಕೊಟ್ಟು ದಾರಿ ಕಾಯಬೇಕು. ಮುಂದೆ ಅದೇ ಬೀಜವು ಬೆಳೆದು ಬೃಹತ್ತಾದ ವೃಕ್ಷವಾಗುತ್ತದೆ. ನೂರು ವರ್ಷಗಳ ಕಾಲ ನಮಗೆ ಮಧುರ ಫಲವನ್ನೀಯುತ್ತದೆ.

ಹಾಗೆಯೇ ಆಧ್ಯಾತ್ಮ ಜ್ಞಾನವು ಒಂದು ಬೀಜ. ನಮ್ಮಲ್ಲಿ ಅನೇಕ ಪವಿತ್ರ ಗ್ರಂಥಗಳು ಇರಬಹುದು. ಅವುಗಳನ್ನು ನಾವು ನೂರಾರು ಸಲ ಓದಿ ಕಂಠಪಾಠ ಮಾಡಿರಲೂ ಬಹುದು. ಹಾಗೆಂದ ಮಾತ್ರಕ್ಕೆ ಅದು ಅನುಭಾವದ ಅಮೃತ ಫಲವನ್ನು ನೀಡೀತೆಂದು ಹೇಳಲಾಗದು. ಹೀಗೆ ಓದಿ ಕೇಳಿ ಪಡೆದ ಆತ್ಮಜ್ಞಾನದ ಬೀಜವನ್ನು ಹಸನಾದ ಹೃದಯದ ಭೂಮಿಯಲ್ಲಿ ಬಿತ್ತಬೇಕು. ಅದಕ್ಕೆ ಸದ್ಭಾವದ ಜಲವನ್ನೂ, ಸತ್ಕ್ರಿಯೆಯ ಗೊಬ್ಬರವನ್ನಿತ್ತು ರಕ್ಷಿಸಬೇಕು. ಒಂದಿಷ್ಟು ಕಾಲಾವಕಾಶ ಕೊಟ್ಟು ಕಾಯಬೇಕು. ಆಗ ಅದೇ ಜ್ಞಾನದ ಬೀಜವು ವಿಶಾಲವೃಕ್ಷವಾಗಿ ಬೆಳೆದು ಅನುಭಾವದ ಅಮೃತ ಫಲಗಳನ್ನು ನೀಡುತ್ತದೆ. ಆತ್ಮಾನಂದವನ್ನು ತರುತ್ತದೆ. ಈ ಬಗೆಯಾದ ಸಾಧನೆಯಿಂದ ಒಬ್ಬ ವ್ಯಕ್ತಿಯು ಸಂತನಾಗಿ ಹೊರಬರುತ್ತಾನೆ !

ಹಿಂದಿನವರಿಗಿಂತ ನಾವು ಇಂದು ಹೆಚ್ಚಾಗಿ ಓದಿದ್ದೇವೆ, ಕೇಳಿದ್ದೇವೆ. ಆದರೂ ನಮ್ಮಲ್ಲಿ ಬುದ್ಧ–ಬಸವ, ಮಹಾವೀರ–ಶಂಕರ, ನಿಜಗುಣರಂಥ ಅನುಭಾವಿಗಳಿಂದು ಅಷ್ಟಾಗಿ ಕಂಡುಬರುತ್ತಿಲ್ಲವಲ್ಲ ಏಕೆ ?

ಈ ಧರ್ಮ ಚೆನ್ನಾಗಿಲ್ಲವೆಂದು ಆ ಧರ್ಮವನ್ನೂ, ಆ ಧರ್ಮ ಚೆನ್ನಾಗಿಲ್ಲವೆಂದು ಮತ್ತೊಂದು ಧರ್ಮವನ್ನೂ ಸ್ವೀಕರಿಸುತ್ತ ಹೋಗುತ್ತೇವೆ. ಧರ್ಮಾಂತರ ಮಾಡುತ್ತೇವೆ. ನಮ್ಮಲ್ಲಿ ತಾತ್ತ್ವಿಕಸ್ಥಿರತೆಯೇ ಇಲ್ಲವಲ್ಲ ಏಕೆ ? ಅದಕ್ಕೆ ಕಾರಣವಿಷ್ಟೆ: ಸಾಧನೆಯ ಕೊರತೆ. ಬರೀ ಜ್ಞಾನದ ಬೀಜವನ್ನು ಸಂಗ್ರಹಿಸಿದರೆ ಸಮಾಧಾನವಾಗುವುದಿಲ್ಲ. ಅದನ್ನು ಸಾಧನೆಯ ಮೂಲಕ ಚೆನ್ನಾಗಿ ಕೃಷಿ ಮಾಡಬೇಕು. ಆಗ ಮಾತ್ರ ಅದು ನಮಗೆ ಆತ್ಮಾನುಭವದ ಅಮರ ಫಲವನ್ನೀಯುತ್ತದೆ. ಪರಮಶಾಂತಿಯನ್ನು ತರುತ್ತದೆ.

ಅದಕ್ಕೆಂದೇ ಶ್ರೀಕೃಷ್ಣನು ಅರ್ಜುನನಿಗೆ ಗೀತೆಯಲ್ಲಿ ಹದಿನೆಂಟು ಅಧ್ಯಾಯಗಳನ್ನು ಹೇಳಿದ. ಭಕ್ತಿ, ಜ್ಞಾನ, ಕರ್ಮ, ಧ್ಯಾನ ಎಲ್ಲ ರೀತಿಯ ಮಾರ್ಗಗಳನ್ನೂ ತಿಳಿಸಿದ. ಆದರೂ ಅರ್ಜುನನ ಸಂಶಯಗಳು ಸಂಪೂರ್ಣವಾಗಿ ನಿರಸನ ವಾಗಲಿಲ್ಲ. ಆತನು ಒಂದಾದನಂತರ ಒಂದು ಸಂಶಯವನ್ನು ಎತ್ತುತ್ತಲೇ ಹೋದ. ಕೊನೆಗೆ ಬೇಸರಿಸಿದ ಶ್ರೀಕೃಷ್ಣನು 'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ !' ಎಂದ. 'ಸರ್ವಧರ್ಮಗಳನ್ನೂ ಪರಿತ್ಯಜಿಸಿ ನನ್ನನ್ನೇ ಶರಣು ಹೊಂದು' ಎಂದು ವಾತ್ಸಲ್ಯದಿಂದ ಹೇಳಿದ. ಅಲ್ಲಿಂದ ಮುಂದೆ ಅರ್ಜುನನ ಸಂಶಯಗಳೆಲ್ಲ ನಿರಸನವಾಗಿ ಜ್ಞಾನದೋಯ ವಾಯಿತು. ಪರಮಶಾಂತಿಯನ್ನು ಅನುಭವಿಸಿದ. ಅಂಥ ಅನುಭಾವಕ್ಕಾಗಿ ಧ್ಯಾನವು ಒಂದು ಸುಗಮಸಾಧನ.

ನೂರಾರು ಧ್ಯಾನಗಳನ್ನು ಸಾರ ರೂಪದಲ್ಲಿ ಐದು ಭಾಗಗಳನ್ನಾಗಿ ಮಾಡಿ ನೋಡುತ್ತಿದ್ದೇವೆ. ೧. ಸುಮ್ಮನೆ ನೋಡುವುದು ಕೇಳುವುದು ಮಾಡುವುದು ನಿರ್ಭಾವ ನಿರೀಕ್ಷಣೆ. ೨. ನೋಡಿದ್ದರಲ್ಲಿ, ಕೇಳಿದ್ದರಲ್ಲಿ, ಮಾಡಿದ್ದರಲ್ಲಿ ಮುಳುಗಿ ಬಿಡುವುದು ಏಕತಾನತೆ. ೩. ತತ್ತ್ವಚಿಂತನೆಯಲ್ಲಿ ಮಗ್ನತೆ ಸಾಧಿಸುವುದು ವಿಚಾರಮಗ್ನತೆ. ೪. ಒಂದು ಲಕ್ಷ್ಯವನ್ನು ಪರಮಾತ್ಮನಲ್ಲಿಟ್ಟು ಸದೈವ ಅವನ ಸ್ಮರಣೆಯೊಂದಿಗೆ ಪ್ರಪಂಚದಲ್ಲಿರುವುದು ಅಖಂಡಾವಧಾನ. ಈ ರೀತಿಯಾದ ನಾಲ್ಕು ಧ್ಯಾನಕ್ರಮಗಳನ್ನು ನೋಡಿದೆವು. ಅವುಗಳನ್ನು ಅನುಸರಿಸುತ್ತಾ ಹೋದರೆ, ಪ್ರಪಂಚವು ನಮಗೆ ಬಂಧನಕಾರಿಯಾಗದು. ಇನ್ನು ಐದನೆಯ ಸದ್ಭಾವಯೋಗ ಅದನ್ನೀಗ ನೋಡುತ್ತೇವೆ.

'ಪರಮ ಸತ್ಯವಸ್ತು ಇದೆ' ಎಂದು ಭಾವಿಸುವುದೇ ಸದ್ಭಾವ. ಇಲ್ಲೊಂದು ಹೂವಿದೆ. ಅದು ಇದೆ ಎನ್ನುವುದೇ ಸದ್ಭಾವ, ಅದು ಇಲ್ಲ ಎನ್ನುವುದೇ ಅಸದ್ಭಾವ. ಜ್ಞಾನವು ಸಾಗರದೋಪಾದಿಯಲ್ಲಿದೆ. ಮನುಷ್ಯನ ಬುದ್ಧಿಗೆ ಮಿತಿ ಇದೆ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಸಾಗರದಲ್ಲಿ ಬೇಕಾದಷ್ಟು ನೀರಿದ್ದರೂ ನಮ್ಮ ಬೊಗಸೆಯಲ್ಲಿ ಎಷ್ಟು ಬರುತ್ತದೆಯೋ ಅಷ್ಟೇ ದಕ್ಕುತ್ತದೆ. ಆದ್ದರಿಂದ ಮನುಷ್ಯನು ಎಲ್ಲವನ್ನೂ ತಿಳಿಯುತ್ತೇನೆ, ನೋಡುತ್ತೇನೆ ಎಂದರೆ ಸಾಧ್ಯವೇ ?

ಒಂದು ಹಕ್ಕಿಯು ಆಕಾಶದ ಅಂತ್ಯವನ್ನು ಕಾಣಬೇಕೆಂದು ಮೇಲೆ ಹಾರಿತು. ಆಕಾಶದ ಅಂತ್ಯವನ್ನು ಕಂಡೇ ಬರುತ್ತೇನೆಂಬ ಛಲ ಅದಕ್ಕೆ. ಎರಡು ಮೂರು ಕಿಲೋಮೀಟರ್ ಹಾರುವುದರಲ್ಲಿ ರೆಕ್ಕೆಗಳು ಸೋತುಬಂದವು. ಆದರೂ ಧೈರ್ಯಗೆಡದೆ ಇನ್ನೊಂದೆರಡು ಕಿಲೋ ಮೀಟರ್ ಹಾರಿತು. ಅದು ಹಾರಿದಷ್ಟು ಹಾರಿದಷ್ಟು ಆಕಾಶವು ಅನಂತವಾಗುತ್ತಲೇ ಹೋಯಿತು. ಅಷ್ಟೊತ್ತಿಗೆ ಹಕ್ಕಿಯ ರೆಕ್ಕೆಗಳು ಸಂಪೂರ್ಣ ಸೋತು ಹೋದವು. ಆಕಾಶದ ಅಂತ್ಯ ಕಾಣುವುದಿರಲಿ, ಮರಳಿ ನೆಲಕಂಡರೆ ಸಾಕು ಎನ್ನುವಂತಾಯಿತು. ನಿರಾಶೆಯಿಂದ ಹಕ್ಕಿಯು ಕೆಳಗಿಳಿಯಿತು.

ಭೂಮಿಗೆ ಬಂದ ನಂತರ ಎಲ್ಲ ಹಕ್ಕಿಗಳು ಸೇರಿ ಕೇಳಿದವು, 'ನಿನಗೆ ಆಕಾಶದ ಅಂತ್ಯವು ಸಿಕ್ಕಿತೆ ?' ಹಕ್ಕಿ ಹೇಳಿತು "ಆಕಾಶದ ಅಂತ್ಯವು ಸಿಗಲಿಲ್ಲ. ಆದರೆ ಒಂದು ಮಹತ್ವದ ವಿಷಯ ಗೊತ್ತಾಯಿತು." ಹಕ್ಕಿಗಳು ಕೇಳಿದವು "ಆ ಮಹತ್ವದ ವಿಷಯ ಯಾವುದು ?" "ಎಷ್ಟೆತ್ತರ ಹಾರಿದರೂ ಆಕಾಶದ ಅಂತ್ಯವು ಸಿಗುವುದಿಲ್ಲ !" ಎನ್ನುವುದೇ ಆ ಮಹತ್ವದ ವಿಷಯ ಎಂದಿತು ಹಕ್ಕಿ.

ಆಗಸದಂತೆ ಸತ್ಯವೂ ಅನಂತವಾಗಿದೆ ಅದನ್ನು ಸಂಪೂರ್ಣ ತಿಳಿಯುತ್ತೇನೆ, ಕಂಡೆಬಿಡುತ್ತೇನೆ ಎಂದರೆ ಆಗದು. ಸತ್ಯವು ನನಗೆ ಗೊತ್ತಿಲ್ಲ. ಅದು ಕಾಣುತ್ತಿಲ್ಲ. ಆದ್ದರಿಂದ ಅದು ಇಲ್ಲವೇ ಇಲ್ಲ, ಎನ್ನಲೂ ಬಾರದು. ಅನಂತವಾದ ಸತ್ಯವು ನಮ್ಮ ಒಳಗೆ-ಹೊರಗೆ, ಮೇಲೆ-ಕೆಳಗೆ, ಸುತ್ತ-ಮುತ್ತ, ಸರ್ವತ್ರವೂ ವ್ಯಾಪಿಸಿದೆ !

ಗಣಿತದಲ್ಲಿ ಅನಂತದ ಕಲ್ಪನೆ ಬಹು ಸೊಗಸಾಗಿದೆ. ಸಂಖ್ಯೆಯನ್ನು ನೂರು, ಸಾವಿರ, ಕೋಟಿ ಎಂದು ಬೆಳೆಸುತ್ತಾ ಹೋದಂತೆ ಕೊನೆಗೆ ಅದು ಅನಂತವಾಗಿ ಬಿಡುತ್ತದೆ. ಆದರೆ ಅನಂತವೆಂದರೆ ಏನು ಎಂದು ಹೇಳಲಾಗದು. ಹೇಳಿದರೆ ಅದು ಅನಂತವಾಗಿ ಉಳಿಯುವುದಿಲ್ಲ, ಸಂಖ್ಯೆಯಾಗುತ್ತದೆ.

ಪ್ರತಿಯೊಂದು ಸಂಖ್ಯೆಯಲ್ಲಿಯೂ ಅನಂತದ ಅಂಶವಿದೆ. ಆದರೆ ಯಾವ ಸಂಖ್ಯೆಯೂ ಅನಂತವಲ್ಲ. ಇಂಥ ಅನಂತವನ್ನು '∝' ಈ ಚಿಹ್ನೆಯಿಂದ ಸಂಕೇತಿಸಬಹುದೇ ವಿನಾ ಅದುವೇ ಅನಂತವಲ್ಲ.

ಈ ಅನಂತವನ್ನು ಭಗವಂತನಿಗೆ ಹೋಲಿಸಬಹುದು. ಅನಂತವನ್ನು ಹೇಗೆ ಕಾಣಲಾಗದೋ ಹಾಗೇ ಭಗವಂತನನ್ನೂ ಕಾಣಲಾಗದು. ಎಲ್ಲಾ ಸಂಖ್ಯೆಗಳೂ ಶೂನ್ಯದಿಂದಲೇ ಪ್ರಾರಂಭವಾಗಿ ಅನಂತದಲ್ಲಿಯೇ ಕೊನೆಗೊಳ್ಳುತ್ತವೆ. ಹಾಗೆ ಎಲ್ಲಾ ಸಚರಾಚರ ವಸ್ತುಗಳೂ ಭಗವಂತನಲ್ಲಿಯೇ ತೋರುತ್ತವೆ. ಕೊನೆಗೆ ಭಗವಂತನಲ್ಲಿಯೇ ಅಡಗುತ್ತವೆ. ಎಲ್ಲಾ ಸಂಖ್ಯೆಗಳಲ್ಲಿಯೂ ಅನಂತದಂಶವಿದೆ. ಆದರೆ ಯಾವ ಸಂಖ್ಯೆಯೂ ಅನಂತವಲ್ಲ. ಹಾಗೇ ಜಗತ್ತಿನ ಸಚರಾಚರ ವಸ್ತುಗಳಲ್ಲಿಯೂ ಭಗವಂತನಿದ್ದಾನೆ. ಆದರೆ ಯಾವ ವಸ್ತುವೂ ಭಗವಂತನಲ್ಲ.

ಅನಂತವನ್ನು '∝' ಈ ಸಂಕೇತದ ಮೂಲಕ ಗುರುತಿಸುತ್ತೇವೆ. ಆದರೆ ಅದುವೇ ಅನಂತವಲ್ಲ. ಹಾಗೆಯೇ ಭಗವಂತನನ್ನು ಲಿಂಗರೂಪದಲ್ಲಿ ಬೇರೆ ಬೇರೆ ಮೂರ್ತಿಗಳ ರೂಪದಲ್ಲಿ ಪೂಜಿಸುತ್ತೇವೆ. ಆದರೆ ಯಾವುದೇ ಮೂರ್ತಿಯು ಭಗವಂತನಲ್ಲ !

ಪ್ರತಿಯೊಂದು ಸಂಖ್ಯೆಯೂ ಅನಂತದ ಅಂಶವೇ ಆಗಿದೆ. ಆದ್ದರಿಂದ ಎಲ್ಲಾ ಅಂಕಿಗಳೂ, ತಾತ್ವಿಕವಾಗಿ ನೋಡಿದರೆ, ಒಂದೇ ಆಗಿವೆ. ಹಾಗೆಯೇ ಎಲ್ಲ ಸಚರಾಚರ ವಸ್ತುಗಳೂ ಭಗವಂತನ ಅಂಶವೇ ಆಗಿವೆ. ಆದ್ದರಿಂದ ಜಗತ್ತಿನಲ್ಲಿರುವುದೆಲ್ಲವೂ ಸ್ವರೂಪತಃ ಒಂದೇ ಆಗಿದೆ. ಈ ದೃಷ್ಟಿಯಿಂದ ನೋಡಿದರೆ ಜೀವಜಗತ್ತೆಲ್ಲವೂ ಒಂದೇ ! ಎಲ್ಲ ಧರ್ಮಗಳೂ ಒಂದೇ. ಎಲ್ಲಾ ದೇವಾನುದೇವತೆಗಳೂ ಒಂದೇ ! ಆದ್ದರಿಂದ ಭಗವಂತನನ್ನು ಯಾವ ರೂಪದಲ್ಲಿ ಪೂಜಿಸಿದರೇನು, ಧ್ಯಾನಿಸಿದರೇನು ? ಎಲ್ಲವೂ ಒಂದೇ ! ಇಂಥ ಅನಂತವಾದ ಭಗವದ್ವಸ್ತುವು ಈ ಜಗತ್ತಿನಲ್ಲಿ ಸರ್ವತ್ರವೂ ನೆಲೆಸಿದೆ ಎಂದು ಭಾವಿಸುವುದೇ ಸದ್ಭಾವ ಧ್ಯಾನಯೋಗ !

ಇದನ್ನೇ ಒಂದು ಉಪನಿಷತ್ತು 'ಈಶಾವಾಸ್ಯಮಿದಂ ಸರ್ವಂ ಯತ್ಕಿಂಚಿತ್ ಜಗತ್ಯಾಂ ಜಗತ್' ಎಂದಿದೆ. ಹಾಗೆಂದರೆ 'ಈ ಜಗತ್ತೆಲ್ಲವೂ ಈಶನಿಂದ ವ್ಯಾಪ್ತವಾಗಿದೆ' ಎಂದರ್ಥ. ಈ ಭಾವವು ನಮ್ಮ ಹೃದಯದಲ್ಲಿ ನೆಲೆಗೊಂಡರೆ ನಾವು ಅದೇ ಕ್ಷಣ ಮುಕ್ತರು. ಅದನ್ನೇ 'ಸದ್ಯೋನ್ಮುಕ್ತಿ' ಎನ್ನುವುದು. ಇರುವುದೆಲ್ಲವೂ ಭಗವಂತನೇ ಎಂದು ಭಾವಿಸಿದಾಗ ಬೇರೆ ಭಗವಂತನನ್ನು ಕಾಣಬೇಕೆಂಬ ಪ್ರಶ್ನೆಯೇ ಉಳಿಯುವುದಿಲ್ಲ.

ಕಲ್ಕತ್ತಾದ ದಕ್ಷಿಣೇಶ್ವರದಲ್ಲಿ ರಾಮಕೃಷ್ಣರು ವಾಸ ಮಾಡಿದ್ದರು. ಅವರ ಬಳಿ ಲಾಟೂ ಮಹಾರಾಜ ಎಂಬಾತ ಸೇವೆಗೆ ಇದ್ದ. ಆತ ಅಶಿಕ್ಷಿತ. ಆತನ ಕೆಲಸ ರಾಮಕೃಷ್ಣರ ಅಂಗರಕ್ಷಣೆ. ಹಾಗೂ ಅವರಿರುವ ಕೋಣೆಯ ಸ್ವಚ್ಛತೆ ಹಾಗೂ ಸಣ್ಣಪುಟ್ಟ ಕೆಲಸಗಳನ್ನು ಮಾಡುವುದು. ಜೊತೆಗೆ ಮಠಕ್ಕೆ ಬಂದ ಭಕ್ತಾದಿಗಳಿಗೆ ಶ್ರೀ ರಾಮಕೃಷ್ಣರ ಭೇಟಿ ಮಾಡಿಸುವುದು. ಇದಷ್ಟೇ ಅವನು ಜೀವನದ ಉದ್ದಕ್ಕೂ ಮಾಡಿದ ಸೇವೆ-ಸಾಧನೆ.

ವಿವೇಕಾನಂದರಂಥ ದೊಡ್ಡ ಜ್ಞಾನಿಗಳು ಒಂದು ದಿನ ಲಾಟೂ ಮಹಾರಾಜರಿಗೆ ಕೇಳಿದರು. "ಎಲ್ಲೆಲ್ಲಿಂದಲೋ ಜನರು ಬಂದು ಶ್ರೀ ರಾಮಕೃಷ್ಣರಿಂದ ಸಾಧನೆ ಹೇಳಿಸಿಕೊಳ್ಳುತ್ತಾರೆ. ನೀನು ಇಲ್ಲಿಯೇ ಅವರ ಹತ್ತಿರದಲ್ಲಿಯೇ ಇದ್ದು ಏನೂ ಸಾಧನೆಯನ್ನು ಹೇಳಿಸಿಕೊಂಡಿಲ್ಲ. ನಿನಗೂ ದೇವದರ್ಶನ ಬೇಡವೇ ?"





ಲಾಟೂ ಮಹಾರಾಜರು ಹೇಳಿದರು, "ಯಾರಿಗೆ ದೇವದರ್ಶನ ಆಗಿಲ್ಲವೋ ಅವರಿಗೆ ಸಾಧನೆ. ನನ್ನ ದೃಷ್ಟಿಯಲ್ಲಿ ರಾಮಕೃಷ್ಣರು ಬೇರೆಯಲ್ಲ, ಭಗವಂತನು ಬೇರೆಯಲ್ಲ. ಇವರ ಕಡೆಯಿಂದ ಸಾಧನೆಯನ್ನು ಹೇಳಿಸಿಕೊಂಡು ನಾನು ಬೇರೆ ಯಾರನ್ನು ಕಾಣಬೇಕಾಗಿದೆ ? ಪ್ರತ್ಯಕ್ಷ ಭಗವಂತನ ಸಾನ್ನಿಧ್ಯದಲ್ಲಿರುವ ನನಗಿನ್ನಾವ ಸಾಧನೆ ?"

ಉಳಿದವರೆಲ್ಲ ಆ ಶಾಸ್ತ್ರ, ಈ ಶಾಸ್ತ್ರ ಎಂದು ತಲೆಗೆ ತಾಪಮಾಡಿಕೊಳ್ಳುತ್ತಿದ್ದರು. ಇತ್ತ ಲಾಟೂ ಮಹಾರಾಜರು ಭಗವದಾನಂದವನ್ನು ಪಡುತ್ತಿದ್ದರು. ಶ್ರೀ ರಾಮಕೃಷ್ಣರನ್ನು ಕಂಡು ಆನಂದಾಶ್ರುಗಳನ್ನು ಸುರಿಸುತ್ತ ಭಕ್ತಿಸಾಗರದಲ್ಲಿ ಮುಳುಗೇಳುತ್ತಿದ್ದರು. ಒಂದು ದಿನ ವಿವೇಕಾನಂದರು ಲಾಟೂ ಮಹಾರಾಜರಿಗೆ ಹೇಳಿದರು, 'ಲಾಟೂ ಮಹಾರಾಜರೆ, ನೀವು ಬಹಳ ಭಾಗ್ಯವಂತರು. ಶ್ರೀ ರಾಮಕೃಷ್ಣರ ಸಾನ್ನಿಧ್ಯದಲ್ಲಿ ನೀವು ಭಗವದಾನಂದವನ್ನು ಅನುಭವಿಸಿದಿರಿ. ನಾವು ಅವರನ್ನು ಭಗವಂತರೆಂದು ಭಾವಿಸದೆ ರಾಮಕೃಷ್ಣರೆಂದೇ ಭಾವಿಸಿ ಏನೇನೋ ಕಲಿಯಲು ಹೋಗಿ ಭಗವಂತನಿಂದ ದೂರಾದೆವು. ನೀವು ಧನ್ಯರಾದಿರಿ !" ಲಾಟೂ ಮಹಾರಾಜರದು ಸದ್ಭಾವರೂಪ ಧ್ಯಾನಯೋಗ !

ನಾವು, ದ್ವೈತ-ಅದ್ವೈತ, ವಿಶಿಷ್ಟಾದ್ವೈತ-ಶಕ್ತಿವಿಶಿಷ್ಟಾದ್ವೈತ ಎಂದು ಸುಮ್ಮನೇ ಶಾಸ್ತ್ರಜಾಲದಲ್ಲಿ ಬೀಳುತ್ತೇವೆ. ಸತ್ಯದೇವನನ್ನು ಅರಿಯದೇ, ಅನುಭವಿಸದೇ ಹೋಗುತ್ತೇವೆ. ಅದಕ್ಕೆಂದೇ 'ಶಾಸ್ತ್ರಜಾಲಂ ಮಹಾರಣ್ಯಂ ಚಿತ್ತವಿಭ್ರಮಣ ಕಾರಣಂ' ಎಂದಿದ್ದಾರೆ. ಪಶುಪಕ್ಷಿಗಳೂ ಸುಳಿಯಲು ಬಾರದಂತಹ ಘೋರಾರಣ್ಯದಲ್ಲಿ ಒಬ್ಬ ಮನುಷ್ಯನನ್ನು ಒಯ್ದು ಬಿಟ್ಟಿದ್ದಾರೆನ್ನಿ. ಅವನು ಎಂದು ಆ ಅರಣ್ಯದಿಂದ ಹೊರಬರುವುದು ? ಅಂದೇ ಈ ಶಾಸ್ತ್ರಾರಣ್ಯದಲ್ಲಿ ಸಿಕ್ಕವೂ ಹೊರಬರುವುದು, ಮುಕ್ತರಾಗುವುದು !

ಈ ಶಾಸ್ತ್ರ-ಶಾಸ್ತ್ರಗಳ ವಾದ ಎಂದಿನಿಂದಲೂ ನಡೆಯುತ್ತಲೇ ಇದೆ. ಅದಕ್ಕೆ ಕೊನೆಯೇ ಇಲ್ಲ ! ಅಂತೆಯೇ ಶಂಕರಾಚಾರ್ಯರು ಕೊನೆಗೆ, 'ಭಜ ಗೋವಿಂದಂ ಮೂಢಮತೇ, ನಹಿ ನಹಿ ರಕ್ಷತಿ ಡುಕುರುಂಕರಣೇ !' ಎಂದರು. 'ಈ ತರ್ಕವಿತರ್ಕಗಳು ನಿನ್ನನ್ನು ಕಾಪಾಡುವುದಿಲ್ಲ. ನೀನು ಸುಮ್ಮನೇ ಭಗವಂತನ ಧ್ಯಾನವನ್ನು ಮಾಡಿ ಧನ್ಯನಾಗು' ಎಂಬುದು ಅದರ ಭಾವಾರ್ಥ. ಸರ್ವಶಕ್ತನೂ, ಸರ್ವವ್ಯಾಪಿಯೂ, ಸರ್ವಜ್ಞನೂ ಆದ ಭಗವಂತನೊಬ್ಬನು ಇದ್ದಾನೆ ಎಂಬ ಭಾವವೇ ಸದ್ಭಾವ. ಇಂಥ ಸದ್ಭಾವವು ನಮ್ಮ ಹೃದಯದಲ್ಲಿ ದೃಢಗೊಂಡಾಗ ನಾವು ಸದ್ಯೋನ್ಮುಕ್ತರು !

ಈ ಸದ್ಭಾವನೆಯು ಹೃದಯದಲ್ಲಿ ನೆಲೆಗೊಂಡಾಗ ಜಗವಿದೆಲ್ಲ. ಹೇಗೆ ಕಾಣುತ್ತದೆ ಎಂಬುದಕ್ಕೆ ಅಕ್ಕಮಹಾದೇವಿಯ ವಚನವು ತುಂಬಾ ಸೊಗಸಾಗಿದೆ.

**ವನವೆಲ್ಲ ನೀವೆ, ವನದೊಳಗಣ ದೇವ ತರುವೆಲ್ಲ ನೀವೆ**
**ತರುವಿನೊಳಗಾಡುವ ಖಗಮೃಗವೆಲ್ಲ ನೀವೆ**
**ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ**
**ಮುಖದೋರಾ !**

ವನ, ಆ ವನದಲ್ಲಿರುವ ಮರಗಳು, ಆ ಮರವನ್ನಾಶ್ರಯಿಸಿರುವ ಪಶುಪಕ್ಷಿಗಳು, ಎಲ್ಲವೂ ಪರಮಾತ್ಮನ ಸ್ವರೂಪವೇ. ಅಷ್ಟೇ ಅಲ್ಲ, ಸಚರಾಚರ ಸೃಷ್ಟಿಯಲ್ಲೆಲ್ಲಾ ಪರಮಾತ್ಮನೇ ತುಂಬಿಕೊಂಡು ಸರ್ವಭರಿತನಾಗಿರುವುದನ್ನು ಅಕ್ಕ ಈ ವಚನದಲ್ಲಿ ಹೃದಯ ಸ್ಪರ್ಶಿಯಾಗಿ ಚಿತ್ರಿಸಿರುವಳು. ಅಕ್ಕನದು ಸದ್ಭಾವ, ಶಿವಮಯ ದೃಷ್ಟಿ! ಸಾಧಕನಿಗೆ ಈ ದೃಷ್ಟಿಯು ಸದ್ಭಾವಯೋಗದಿಂದ ಪ್ರಾಪ್ತವಾಗುತ್ತದೆ. ಆಗ ಸಾಧಕನು ಸಮಸ್ತ ಜಗತ್ತಿನಲ್ಲಿ ಪರಮಾತ್ಮನನ್ನೇ ಕಾಣುತ್ತಾನೆ ! ಅವನಿಗೆ ತಾನಿರುವ ಭುವಿಯೇ ಸ್ವರ್ಗವಾಗಿ ಬಿಡುತ್ತದೆ !

ಹಕ್ಕಿಯೊಂದು ಮಧುರ ಗಾಯನ ಮಾಡಿ ನಿಸರ್ಗದ ಸ್ವರ್ಗ ನಿರ್ಮಿಸಿತ್ತು ! ಅಕಸ್ಮಾತ್ ಅಲ್ಲಿಗೆ ಭಗವಂತ ಬಂದ. ಹಕ್ಕಿಯ ಹಾಡು ಕೇಳಿ ಕಾಲು ಕೀಳದಂತಾಗಿ ಅಲ್ಲಿಯೇ ನಿಂತ. ದೇವಾನುದೇವತೆಗಳ ಹಾಡು ಕೇಳಿದಾಗಲೂ ಇಷ್ಟು ಸಂತಸವಾಗಿರಲಿಲ್ಲ ಅವನಿಗೆ ! ಭಗವಂತನು ಹಕ್ಕಿಗೆ ಹೇಳಿದ, "ಹಕ್ಕಿಯೇ ನಿನ್ನ ಹಾಡು ಕೇಳಿ ನನ್ನ ಹೃದಯ ತುಂಬಿ ಬಂದಿದೆ. ನಿನ್ನನ್ನು ಸ್ವರ್ಗಕ್ಕೆ ಕರೆದೊಯ್ಯುವ ಇಚ್ಛೆಯಾಗಿದೆ. ಬರುತ್ತೀಯಾ ?"

ಹಕ್ಕಿಯು ಭಗವಂತನಿಗೆ ಕೇಳಿತು, "ನಿನ್ನ ಸ್ವರ್ಗದಲ್ಲಿ ಗಿಡಮರ, ಹಳ್ಳಕೊಳ್ಳ, ಸೂರ್ಯಚಂದ್ರರು ಇದ್ದಾರೆಯೇ ?" ಸ್ವರ್ಗದ ಭವ್ಯತೆಯ ಕಲ್ಪನೆಯೇ ಇಲ್ಲದ ಹಕ್ಕಿಯ ಕಂಡು ಅಯ್ಯೋ ಎನ್ನಿಸಿ ಭಗವಂತ ಹೇಳಿದ, "ಸ್ವರ್ಗದಲ್ಲಿ ಗಿಡಮರಗಳಿಲ್ಲ. ಅಲ್ಲಿರುವುದು ಬರೀ ಕಲ್ಪವೃಕ್ಷಗಳು ! ಹಳ್ಳಕೊಳ್ಳಗಳಿಲ್ಲ. ಅಲ್ಲಿರುವುದು ಹಾಲಿನಹಳ್ಳ, ಜೇನಿನ ಹೊಳೆ. ಅಮೃತದ ಸಾಗರ ! ಅಲ್ಲಿ ಸದೈವ ಬೆಳಕೇ ಇರುವುದರಿಂದ ಈ ಸೂರ್ಯಚಂದ್ರರ ಪ್ರಶ್ನೆಯೇ ಬರುವುದಿಲ್ಲ !

ಹಕ್ಕಿ ಹೇಳಿತು "ಭಗವಂತನೇ, ಇಲ್ಲೇನು ಕೊರತೆ ಇದೆ ಹೇಳು ! ಆಯುಷ್ಯದುದ್ದಕ್ಕೂ ಅನುಭವಿಸಿದರೂ ಮುಗಿಯದ ಅನ್ನ, ನೀರು, ಗಾಳಿ, ಬೆಳಕು, ಸೃಷ್ಟಿ ಸೌಂದರ್ಯ ತುಂಬಿ ಸೂಸಿದೆ. ನನ್ನ ದೃಷ್ಟಿಯಲ್ಲಿ ಈ ಭೂಮಿಯೇ ನಿಜವಾದ ಸ್ವರ್ಗ !"

ಹಕ್ಕಿಯ ಮಾತು ಕೇಳಿ ಭಗವಂತನೂ ಸ್ವರ್ಗಕ್ಕೆ ಹೋಗುವುದ ಮರೆತಿರಬೇಕು ! ತಾನಿದ್ದಲ್ಲಿಯೇ ಸ್ವರ್ಗವನ್ನು ಕಂಡ ಹಕ್ಕಿಯ ಭಾವ, ಸದ್ಭಾವ ! ಮಾನವನಾದರೋ ಇಲ್ಲಿ ಜಪ-ತಪ, ವ್ರತಪೂಜೆಗಳನ್ನು ಮಾಡಿ ಬೇರೆ ಎಲ್ಲಿಯೋ ಸ್ವರ್ಗವನ್ನು ಕಾಣಲಿಕ್ಕೆ ಹೊರಟಿದ್ದಾನೆ. ಹಾಗಾಗದೆ ನಾವಿರುವುದೇ ಸ್ವರ್ಗವಾಗಬೇಕು. ನಾವು ಕಾಣುವುದೆಲ್ಲವೂ ಭಗವಂತನ ರೂಪವಾಗಬೇಕು. ಅದು ಈಶಾವಾಸ್ಯ ದೃಷ್ಟಿ. ಅದುವೇ ಸದ್ಭಾವಯೋಗ. ಸಾಧಕನು ಈ ಸದ್ಭಾವ ಯೋಗದಲ್ಲಿ ನಿಂತಾಗ, ಅವನಿಗೆ 'ನಾನಾರು ?' ಎಂಬುದರ ನಿಜದರ್ಶನ ! ■

*(ಕೃಪೆ: ನಾನಾರು ?)*






# ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಈಚಿನ ಶೋಧಗಳು

– ಡಾ. ಎಂ.ಜಿ. ನಾಗರಾಜ್ *

*(ಕಳೆದ ಸಂಚಿಕೆಯಿಂದ)*

## ಶ್ರೀ ಗೋಸಲಸಿದ್ಧೇಶ್ವರ ಬೆಳಗಿದ ಕ್ಷೇತ್ರಗಳು

## ಸಿದ್ಧಗಂಗೆಯಲ್ಲಿ ಶ್ರೀ ಗೋಸಲ ಸಿದ್ದೇಶ್ವರರು

ತುಮಕೂರು ಪ್ರದೇಶದಿಂದ ಕೇತಯ್ಯ ದಂಡನಾಯಕನು ಹರದನಹಳ್ಳಿ ಪ್ರದೇಶಕ್ಕೆ ಹೊಯ್ಸಳ ದೊರೆಯ ಆಣತಿಯಂತೆ ಸಾಗಿದ. ಅಲ್ಲಿ ಕೇತಸಮುದ್ರ–ಕೇತಶರಧಿ–ಸಿದ್ಧಗಂಗಾ ಪರಿಸರವು ಮೇದಾರ ಕೇತಯ್ಯ (ಅವನ ತಪೋನುಷ್ಠಾನ, ಕಾಯಕ ಸಾಧನಾ ಮಹತ್ವದ ಕುರುಹಾಗಿ 'ಕೇತಸಮುದ್ರ' ಎಂಬ ಸ್ಥಳನಾಮ ರೂಪಿತಗೊಂಡಿರುವಂತಿದೆ; ಅವನ ಶಿಲ್ಪವೂ ಸಿದ್ಧಗಂಗಾ ಪರಿಸರದಲ್ಲಿ ಕಾಣಬಂದಿದೆ). ಮಡಿವಾಳ ಮಾಚಯ್ಯ, ಸಿದ್ಧರಾಮೇಶ್ವರರಂಥ ಶರಣರ ಅನುಷ್ಠಾನ ಕ್ಷೇತ್ರವೂ ಆಗಿದ್ದ ಸಂಗತಿಯನ್ನು ಅವನು ಗೋಸಲಾರ್ಯವರ್ಯ ಸ್ವಾಮಿಯವರಲ್ಲಿ ಬಿನ್ನವಿಸಿರಬೇಕು.





ದೊಡ್ಡಸಿದ್ಧಪ್ಪನ ಗವಿಯ ಬಾಗಿಲು ಶಾಸನ ಹಾಗೂ ಶಿವಲಿಂಗ

ಹರದನಹಳ್ಳಿಯ ಕ್ರಿ.ಶ. ೧೩೪೫ರ ಶಾಸನೋಕ್ತ ಶ್ರೀ ಗೋಸಲಾರ್ಯರು ಆನಂತರವೇ ಸಿದ್ಧಗಂಗಾ ದಿಸೆಯತ್ತ ಧರ್ಮೋ ಸಾಂಸ್ಕೃತಿಕ ಪ್ರಚಾರ ಮಾಡುತ್ತ ಸಾಗಿರಬೇಕು. ಈ ದಿಸೆಯಲ್ಲಿ ಚನ್ನಪಟ್ಟಣ ತಾ. ಸೋಗಾಲ, ಕೊರಟಗೆರೆ ತಾ. ಸಿಂಗ್ರಿಹಳ್ಳಿಯ ದೇಗುಲಗಳು ಸೂಚನೆ ನೀಡಿವೆ.

ಇವಲ್ಲದೆ ಮಾಗಡಿ ತಾ. ಕಾಳೇರಿಯ ಜಂಗಮಠಕ್ಕೆ ಶ್ರೀ ಗೋಸಲಾರ್ಯರು ತಮ್ಮ ಶಿಷ್ಯವೃಂದದೊಡನೆ ಬಂದು ತಪೋನುಷ್ಠಾನ ಮಾಡಿದ ಬಗ್ಗೆ ಐತಿಹ್ಯಕ್ಕೆ ಪೂರಕವಾಗಿ ಈ ಪರಿಸರದ ಮಾರಸಂದ್ರದ ಬಳಿಯ ಚಿಕ್ಕಮಸ್ಕಲ್ ಮಠಕ್ಕೂ ಇಂಥದೇ ಐತಿಹ್ಯವಿದೆ. ಈ ಜಂಗಮ ಮಠಾಧ್ಯಕ್ಷರಾಧಿಶ್ವರರು ನೆಲವನ್ನು ಕೈನಿಂದ ಬಗೆದು ನೀರು ಬರಿಸಿದರೆಂದು ಐತಿಹ್ಯವಿದೆ. ಬೆಟ್ಟದ ಮೇಲೆ ಗೋಸಲಸಿದ್ಧೇಶ್ವರ ಹೆಸರಿನ ಶಿವಲಿಂಗವಿದ್ದರೂ, ಜನವಾಡಿಕೆಯಲ್ಲಿ ಸಿದ್ಧೇಶ್ವರ ಬೆಟ್ಟವೆಂದೇ ರೂಢಿಗೊಂಡಿದೆ. ಚಿಕ್ಕಮಸ್ಕಲ್ ಜಂಗಮ ಮಠದಲ್ಲಿ ತಪೋನುಷ್ಠಾನ ಮಾಡಿದ ಬಗ್ಗೆಯೂ ಐತಿಹ್ಯವಿದೆ ಎಂದಿದ್ದಾರೆ. ವಿಜಯದಶಮಿಯ ಸಂದರ್ಭದಲ್ಲಿ ಬನ್ನಿ ಕಡಿದು ಉತ್ಸವಾದಿಗಳನ್ನು ಈ ಬೆಟ್ಟದಲ್ಲಿ ಆಚರಿಸುತ್ತಾರೆ.

ಶಿವಗಂಗೆಯ ರುದ್ರಮುನಿ ಕ್ಷೇತ್ರವೂ ಆಗಿದ್ದ ಕಾರಣ ಶ್ರೀ ಗೋಸಲಾರ್ಯರು ಅಲ್ಲಿಗೂ ಸಾಗಿ ನಂತರ ಸಿದ್ಧಗಂಗಾ ಗಿರಿಗೆ ತಾಗಿಕೊಂಡಿರುವ ಶಾಸನೋಕ್ತ ಇಳಕಲ್ ಬೆಟ್ಟದ ಶ್ರೀ ರಾಮೇಶ್ವರ ದರ್ಶನಕ್ಕೈದ ಬಗ್ಗೆ ಸಾಹಿತ್ಯೋಕ್ತವಿದೆ. ಈ ರಾಮಲಿಂಗೇಶ್ವರ ಬೆಟ್ಟದ ಗವಿಗಳಲ್ಲಿ ಶಿಷ್ಯರೊಡನೆ ತಪೋನುಷ್ಠಾನ ಮಾಡಿರುವ ಬಗ್ಗೆಯೂ ಉಕ್ತವಿದೆ, ಸಾಕ್ಷಿ ನೆಲೆಗಳೂ ಇವೆ. ಅಲ್ಲಿ ದೊಡ್ಡಲಿಂಗವೊಂದಿರುವ, ಪ್ರಾಗೈತಿಹಾಸಿಕ ಬಂಡೆ ಭಿತ್ತಿಗೀರು ಚಿತ್ರಗಳು ಇರುವ, ಗವಿಯ ಬಾಗಿಲವಾಡದ ಮೇಲೆ 'ಗೋಸಲ । ಸಿದ್ದೇಶ್ವರ (ಗವಿ) ಬಾ(ಗಿಲು)' ಎಂಬ ಅಪ್ರಕಟಿತ ಶಾಸನವೂ ಇದೆ. ಈ ಶಾಸನ ಹಾಕುವ ವೇಳೆಗೆ, ಶ್ರೀ ಗೋಸಲಾರ್ಯರು, ಸಿದ್ಧಗಂಗಾಗಿರಿಯಲ್ಲಿ ಗಂಗಾವರಣ ನೆಲೆಶೋಧಿಸಿ ತಮಿಳು ಶಿಷ್ಯನಿಗೆ ನೀರುಣಿಸಿ ದಾಹ ತವಿದ ಘಟನೆ ನಡೆದಿದ್ದುದರ ಸೂಚನೆ ಒದಗುತ್ತದೆ.

* ನಂ. ೨೨೧, 'ಅನರ್ಘ್ಯ, ಶ್ರೀ ಜ.ಚ.ನಿ. ಕೃಪೆ' ೬ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦










ಸಿದ್ಧಗಂಗಾ ತೀರ್ಥೋದ್ಭವ ನೆಲೆ

ಕ್ಯಾತ್ಸಂದ್ರವನ್ನು 'ಸಿದ್ದಗಂಗಾಕ್ಷೇತ್ರ'ವಾಗಿಸಿದ್ದು, ಶ್ರೀ ಗೋಸಲಾರ್ಯರು, ತಮಿಳು ಶಿಷ್ಯನ ನೀರಡಿಕೆಯನ್ನು ಸಿದ್ಧಗಂಗಾ ತೀರ್ಥ ಕುಂಡಿಕೆಯ ಪವಿತ್ರ ತೀರ್ಥದಿಂದ ತಣಿದಿದುದಲ್ಲದೆ, ಶಿಷ್ಯವೃಂದಕ್ಕೆ 'ಶಿವಾನುಭವ' ಬೋಧನೆಯಾಗಿ ಮಠವನ್ನು ಸ್ಥಾಪಿಸಿದರು. ಮಠವೆಂದ ಮೇಲೆ ದಾಸೋಹಕಾರ್ಯವೂ ಸಹಯೋಗವಾಗಿರಬೇಕು. ನಾಥಪಂಥ, ನಂತರ ಶರಣತ್ರಯರ ಉಪಾಸನಾ ಕ್ಷೇತ್ರಪರಿಸರದ ಇಳಕಲ್ ರಾಮೇಶ್ವರ ಯಾತ್ರಾರ್ಥಿಗಳು – ಇವರೆಲ್ಲರ ಭಕ್ತಿಯಾತ್ರೆಗೆ 'ಸಿದ್ಧಗಂಗಾ ತೀರ್ಥದರ್ಶನ'ವೂ ಸೇರಿ ಸಿದ್ಧಗಂಗಾಕ್ಷೇತ್ರದ ಪಾವಿತ್ರತೆ, ಅಧ್ಯಾತ್ಮಿಕ ದರ್ಶನಕ್ಕೆ ಕಾರಣವಾದುವು. ಶ್ರೀ ಗೋಸಲಾರ್ಯರ 'ಸಿದ್ಧಗಂಗಾಜಲೋದ್ಭವ'ದ ಮಣಿಹವು ಪವಾಡವಾಗಿ ಭಕ್ತಜನರಿಗೆ ತೋರಿ ಅವರು ಸಿದ್ಧಪುರುಷರೆನಿಸಿದರು. ಅಂತಾಗಿ 'ಗೋಸಲ ಸಿದ್ದೇಶ್ವರ' ಎಂದು ಭಕ್ತ ಜನತೆಯಲ್ಲಿ ನವ ಅಭಿಧಾನದಿಂದ ಜನಪ್ರಿಯ ಗುರುಗಳಾದರು. ಈ ಹೆಸರಿನ ಪ್ರಾಚಲಿತ್ಯಕ್ಕೆ ಪೂರಕವೆಂಬಂತೆ 'ಸಿದ್ಧಗಂಗಾತೀರ್ಥ ಕುಂಡಿಕೆ'ಯ ಪ್ರವೇಶದ್ವಾರದ ಬಂಡೆಯ ಮೇಲ್‌ತುದಿಯಲ್ಲಿ [ಗೋ]ಸಲಾ ಸಿದ್ದೇಸ್ವರ[ಯರ] ...[ಸುಗದ್ದುಗೆ...] ಎಂಬ (ಗೋಸಲಸಿದ್ಧೇಶ್ವರ ಕತೆ ಐತಿಹ್ಯವಲ್ಲ ಇತಿಹಾಸ ಸಾಕ್ಷಿ ಎಂಬುದಕ್ಕೆ ಈ ಶಾಸನ ಲಭ್ಯವಾಗಿದೆ. ನಿರಂಜನ ವಂಶ ರತ್ನಾಕರ ಸಾಹಿತ್ಯದಲ್ಲಿ ಹೇಳಿರುವುದಕ್ಕೆ ಈ ಹೊಸ ಶಾಸನದಿಂದ ಇತಿಹಾಸದ ಸಾಕ್ಷಿ ದೊರಕಿದಂತಾಗಿದೆ). ಶಾಸನದ ಅಕ್ಷರಗಳು ಈ ಹಿಂದೆ ಹೇಳಿದಂತೆ ನನ್ನ ಕಣ್ಣೋದಿಗೆ ಕಂಡುಬಂದಿವೆ. ಅದು ಅಪ್ರಕಟಿತ ಶಾಸನವೂ ಆಗಿದೆ. ಗಮನಾರ್ಹವಾಗಿ ಈ ಗೋಸಲ ಸಿದ್ಧೇಶ್ವರ ಬಂಡೆ ಶಾಸನಕ್ಕೆ ಅಭಿಮುಖವಾಗಿ ಗೋಸಲ ಪರಂಪರೆಯಿಂದ ಬಂದ ಶ್ರೀ ತೋಂಟದ ಸಿದ್ಧಲಿಂಗ ಯತಿಗಳ ತೋರುಗದ್ದುಗೆ ದೇಗುಲವಿದೆ. ಅದರ ದ್ರಾವಿಡ ಶೈಲಿಯ ವಿಮಾನ ಗೋಪುರದ ಕೋಷ್ಠಗಳಲ್ಲಿ ಟಗರುದಲೆ ದಕ್ಷ ಸಹಿತನಾದ ವೀರಭದ್ರ, ಧ್ಯಾನಸ್ಥ ಯತಿ, ದಿಶಾ ಅಂಚುಗಳಲ್ಲಿ ಸಿಂಹದ್ವಯಗಳು, ಸ್ಥಾನಕ ಮುನಿಗಳ ಶಿಲ್ಪಗಳು ದಂಡಿಯಾಗಿವೆ. ಈ ರಚನೆಗಳೆಲ್ಲ ಕೂಡಿ ವಿಶಿಷ್ಟ ಜಲಗಂಗಾ ಸಾನ್ನಿಧ್ಯ, ಗುರುಸಾನ್ನಿಧ್ಯದ ಪರಿಸರವನ್ನು ಭಕ್ತಿಯ ಚೇತೋಹಾರಿ ನೆಲಗಟ್ಟಾಗಿ ರೂಪಿಸಿವೆ.

ಸಿದ್ದಗಂಗೆಯಲ್ಲಿ ಗೋಸಲ ಸಿದ್ಧೇಶ್ವರರು ಸ್ಥಾಪಿಸಿದ ಹಳೆಯ ಮಠದಲ್ಲಿ 'ಗೋಸಲ ಸಿದ್ಧೇಶ್ವರ', ಮತ್ಸೇಂದ್ರನಾಥ,



ಸಿದ್ಧಗಂಗಾ ತೀರ್ಥ ಕುರಿತ ಶಾಸನೋಕ್ತ ಸಂಸ್ಕೃತ ಶ್ಲೋಕ

ಗೋತ್ರಪುರುಷರಾದ ಭೃಂಗಿ, ವೀರಭದ್ರ, ಶರಣರಾದ ಭಕ್ತಿಭಂಡಾರಿ ಬಸವಣ್ಣ, ಅಘ್ಘವಣಿ ಹೊನ್ನಯ್ಯ ಇರಿಭಕ್ತ ಮುಂತಾದವರ ಸ್ತಂಭಶಿಲ್ಪಗಳಿವೆ. ಮುಂದೆ ತೋಂಟದ ಸಿದ್ಧಲಿಂಗರು ಸಿದ್ಧಗಂಗೆಗೆ ತಪೋನುಷ್ಠಾನಕ್ಕೆ ಬಂದವರಾಗಿ, ರಾಮೇಶ್ವರ ಬೆಟ್ಟದ ಗವಿಯೊಂದು ಅವರ ಹೆಸರಿನಲ್ಲಿ (ಚಿಕ್ಕ ಸಿದ್ಧಪ್ಪಗವಿ) ಇದೆ. ಗೋಸಲ ಸಿದ್ಧೇಶ್ವರರಿಗೆ 'ದೊಡ್ಡಸಿದ್ಧಪ್ಪ ಗವಿ' ಎಂಬ ಹೆಸರಿನ ಗವಿಯೊಂದಿದೆ. ಈ ಹಿನ್ನೆಲೆಯಾಗಿ ತೋಂಟದ ಸಿದ್ಧಲಿಂಗ ಯತಿಗಳ ಶಿಲ್ಪವೂ ಹಳೆಮಠದ ಸ್ತಂಭಗಳಲ್ಲಿದೆ, ಬೆಂಗಳೂರು ನಿರ್ಮಾತೃ ಹಿರಿಯ ಕೆಂಪೇಗೌಡನ ಮಾರುವೇಷದ ಕಂಬಳಿ ಹೊದ್ದ ಕೋಲುಗೌಡನ ವೇಷದ ಶಿಲ್ಪವೂ ಇದೆ.

ಗೋಸಲಸಿದ್ಧೇಶ್ವರರು ಸಾಹಿತ್ಯೋಕ್ತ ಸಿಡಿಲಕಲ್ಲು ರಾಮೇಶ್ವರಬೆಟ್ಟ, ಶಾಸನೋಕ್ತ ಇಳಕಲ್ ರಾಮೇಶ್ವರ ಬೆಟ್ಟ ಎನಿಸಿಕೊಂಡ, ಆ ಬೆಟ್ಟದ ಗವಿಗಳಲ್ಲಿ ತಪೋನುಷ್ಠಾನ ಮಾಡಿದಂತೆ, ತೋಂಟದ ಸಿದ್ಧಲಿಂಗ ಯತಿಗಳು ಸಿದ್ಧಗಂಗಾಕ್ಷೇತ್ರದ ಈ ಬೆಟ್ಟದ ವಿಶಾಲವಾದ ಗವಿಯೊಂದರಲ್ಲಿ (ಚಿಕ್ಕಸಿದ್ಧಪ್ಪನ ಗವಿ–ಜನ ಇದರ ವಿಶಾಲತೆ ನೋಡಿ ದೊಡ್ಡಸಿದ್ಧಪ್ಪನ ಗವಿ ಎಂದೂ ಕರೆದಿರುವುದುಂಟು) ತಮ್ಮ ೭೦೦ ವಿರತ ಶಿಷ್ಯರೊಡನೆ ತಪೋನುಷ್ಠಾನ ಮಾಡಿದರು ಎಂಬುದಕ್ಕೆ ಆ ಗವಿಯ ವಿಸ್ತಾರ ಹಾಗೂ ಅಲ್ಲಿಯ ಪ್ರಾಚೀನ ಪೂರ್ಣಶಿವಲಿಂಗದ ಅಸ್ತಿತ್ವವೂ ಸಾಕ್ಷಿ ಎಂಬಂತಿದೆ. ಇದಲ್ಲದೆ

ಶ್ರೀ ಸಿದ್ಧಗಂಗಾ ಗವಿ ಬಾಗಿಲ ಮೇಲಿನ ಬಂಡೆಯಲ್ಲಿನ ಗೋಸಲ ಸಿದ್ಧೇಶ್ವರ ಶಾಸನ

ಕ್ರಿ.ಶ.೧೮೨೦ರ ಯತಿ ಬಸವಲಿಂಗೇಶವ 'ತೋಂಟದ ಸಿದ್ಧೇಶ್ವರ ಸಾಂಗತ್ಯ'ದಲ್ಲಿ'

*'ಗುರುವರನೊಂದುದಿನದೊಳೂರ ಪೋಜಿವಂಟು*
*ವಿರತರೊಗ್ಗಿನೊಳೆಯ್ದುಂದು*
***ಪಿರಿದು ಸಿಡಿಲಕಲ್ಲು ಬೆಟ್ಟದ ರಾಮೇಶ್ವರನ***
*ಗುಡಿಯೊಳೊಪ್ಪುತಿರಲು'*

– ಎಂದಿರುವಲ್ಲಿ ಸುಮಾರು ನಾಲ್ಕು ಸಾವಿರ ಅಡಿ ಎತ್ತರ ಮೀರಿ ಇರುವ, ಈ ಬೆಟ್ಟದ ಮೇಲೆ ಡಾ. ಡಿ.ವಿ. ಪರಮಶಿವಮೂರ್ತಿಯವರು ಕಂಡುಹಿಡಿದ ಗಂಗರ ಕಾಲದ ಬಂಡೆಶಾಸನವೂ ಇರುವಲ್ಲಿ, ಗಂಗರ ಕಾಲದಿಂದಲೂ ಪ್ರಸಿದ್ಧಗೊಂಡಿದ್ದ ಕದಂಬ ನಾಗರಶೈಲಿಯ ಗೋಪುರ ಹೊಂದಿದ್ದ ಈ ರಾಮೇಶ್ವರ ಗುಡಿಯಲ್ಲಿ ಕೆಲಸಮಯ ತೋಂಟದ ಸಿದ್ಧಲಿಂಗಯತಿಗಳು ಇದ್ದರೆಂಬುದು ಸ್ಪಷ್ಟ. ಅವರು (ಷಟ್‌ಸ್ಥಲ ಸಾರಾಮೃತ ಟೀಕೆಗಳು ಭಾಗ-೧) ಸ್ತೋತ್ರವಚನದಲ್ಲಿ ತಮ್ಮ ಗುರು ಪರಂಪರೆಯ ಬಗ್ಗೆ ಹೇಳಿಕೊಂಡಿರುವುದು ಹೀಗಿದೆ.

*'ಹರದನಹಳ್ಳಿಯ **ಗೋಸಲದೇವರ** ಶಿಷ್ಯರು ಶಂಕರದೇವರು*
*ಶಂಕರದೇವ ಶಿಷ್ಯರು ಚನ್ನ ಬಸವದೇವರು*
*ಚನ್ನಬಸವದೇವರ ಕರಕಮಲದಲ್ಲಿ*
*ಉತ್ಪತ್ಯವಾದ ಶಿಶು ಸಿದ್ಧಲಿಂಗ ನಾನಯ್ಯ*
*ಅನಾದಿವಿಡಿದು ಬಂದ ಗುರು ಅನಾದಿವಿಡಿದು ಬಂದ ಲಿಂಗ*
.......................................
*ಅನಾದಿವಿಡಿದು ಬಂದ ಭಕ್ತಿಜ್ಞಾನ ವೈರಾಗ್ಯ*
*ಅನಾದಿ ಸಂಸಿದ್ಧವಾದ ವೀರಶೈವಾಚಾರ ಸಂಪತ್ತು*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವ'*

ಹರದನಹಳ್ಳಿಯಿಂದ ತಮ್ಮಿಂದ ಉಪದೇಶ ಪಡೆದು ಕರ್ತೃಭೃತ್ಯಭಾವವನು ಮುಂದುಗೊಂಡು ಆಚರಿಸಲ್ಪಟ್ಟಂಥ ಶಂಕರದೇವರು-ಶಂಕರದೇವರೆಂಬ ಶಿವಾಚಾರ್ಯರಿಗೆ (ಟೀಕು ೨) ಗೋಸಲದೇವರು ಹರದನಹಳ್ಳಿಯಲ್ಲಿ ಪಟ್ಟಕಟ್ಟಿ ತಾವು ದೇಶಸಂಚಾರದಲ್ಲಿ ಸಿದ್ಧಗಂಗೆಗೆ ಬಂದು, ಸಿದ್ಧಗಂಗಾ ಜಲಾವತರಣದಿಂದ ಗೋಸಲ ಸಿದ್ಧೇಶ್ವರನೆನಿಸಿದರಷ್ಟೆ ಅಂಥ ಗೋಸಲದೇವರ ಶಿಷ್ಯರು ಹರದನಹಳ್ಳಿ ಪರಂಪರೆಯಿಂದಲೇ ಬಂದ ತೋಂಟದ ಸಿದ್ಧಲಿಂಗ ಯತಿಗಳೂ ಸಿದ್ಧಗಂಗೆಗೆ ಬಂದು ತಪೋನುಷ್ಠಾನ ಮಾಡಿ ಗೋಸಲ

ಗೋಸಲ ಸಿದ್ಧರ ಗವಿ ಬಂಡೆಗೆ ಅಭಿಮುಖವಾದ ತೋಂಟದ ಸಿದ್ಧಲಿಂಗೇಶ್ವರರ ತೋರುಗದ್ದುಗೆ





ಶ್ರೀ ಸಿದ್ಧಗಂಗಾ ತೀರ್ಥ ಕುಂಡಿಕೆ, ಗೋಸಲಸಿದ್ಧೇಶ್ವರರ ಬಾಗಿಲ ಅಭಿಮುಖ ತೋಂಟದ ಸಿದ್ಧರ ತೋರುಗದ್ದುಗೆ ದೇಗುಲದ ಗೋಪುರ ಶಿಲ್ಪಗಳು

ತೋಂಟದ ಸಿದ್ಧಲಿಂಗರ ತೋರು ಗದ್ದುಗೆ ದೇಗುಲದ ದ್ರಾವಿಡ ಶೈಲಿಯ ವಿಮಾನ ಗೋಪುರ

ವಿಶಾಲವಾದ ಚಿಕ್ಕಸಿದ್ಧಪ್ಪನ ಗವಿಯೊಳಗಣ ಶಿವಲಿಂಗ

ಸಿದ್ಧೇಶ್ವರರಂತೆಯೇ ಧರ್ಮೋಸಾಂಸ್ಕೃತಿಕ ಜಾಗೃತಿ ಮಾಡಿದರು. ಅವರ ತೋರುಗದ್ದುಗೆ ದೇಗುಲವು, ಶಾಸನೋಕ್ತ ಗೋಸಲ ಸಿದ್ಧೇಶ್ವರರ ಗವಿಗದ್ದುಗೆ(!)ಗೆ ಸಿದ್ಧಗಂಗಾತೀರ್ಥ ಕುಂಡಿಕೆ ಅಭಿಮುಖವಾಗಿ ಇರುವುದು ಸಾಂಕೇತಿಕ ಅಷ್ಟೇ ಅಲ್ಲ, ಸಾಕ್ಷ್ಯಸಾಧನವೂ ಆಗಿದೆ. ಇಂಥ ಮಹೋನ್ನತ ಮಹಿಮಾ ಆಧ್ಯಾತ್ಮಿಕ ಸಾಂಸ್ಕೃತಿಕ ಸೇವಾವ್ಯಕ್ತಿತ್ವಗಳ ಕೃಪಾಶೀರ್ವಾದದಿಂದ ಬೆಳಗುತ್ತ ಬಂದ ಕ್ಷೇತ್ರವು ಅಟವೀಸ್ವಾಮಿಗಳು, ಶ್ರೀ ಉದ್ದಾನಸ್ವಾಮಿಗಳ ಹಾರೈಕೆಯ ಕಾಯಕದ ಸೇವೆಯಿಂದ ಇಂದಿಗೆ ಪ್ರಖ್ಯಾತ ಪ್ರಸಿದ್ಧ ಕಾಯಕ ದಾಸೋಹ ಕೇಂದ್ರವಾಗಿ ಪೂಜ್ಯ ಶತಾಯುಷ್ಯ ಮೀರಿದ ದಶಕದಲ್ಲಿರುವ ಕರ್ನಾಟಕರತ್ನ, ಪದ್ಮಶ್ರೀ ಡಾ. ಶಿವಕುಮಾರ ಮಹಾಸ್ವಾಮೀಜಿಯವರ ಕರ್ತೃತ್ವಶಕ್ತಿಯ ದಿವ್ಯನೆಲೆಯಾಗಿದೆ ಸಿದ್ಧಗಂಗೆ. ಇದಕ್ಕೆ ಸಹಯೋಗವಾಗಿ ಕಿರಿಯ ಸ್ವಾಮಿಗಳಾದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳು ಪರಿಶ್ರಮಿಸುತ್ತಿದ್ದಾರೆ.

ಖ್ಯಾತ ವಚನಕಾರರು ಮತ್ತು ವಕೀಲರಾದ ಮೈಸೂರಿನ ಶ್ರೀ ಎಚ್. ಗಂಗಾಧರನ್ ಅವರು ತಮ್ಮ ಕುಟುಂಬದ ಪರವಾಗಿ ಸಿದ್ಧಗಂಗೆಯ ವಾರ್ಷಿಕ ಸಿದ್ಧಗಂಗಾ ಜಾತ್ರೋತ್ಸವ ಸಮಯದಲ್ಲಿ ಮೊದಲನೆಯ ದಿನ ಶ್ರೀ ಗೋಸಲ ಸಿದ್ಧೇಶ್ವರ ಪಲ್ಲಕ್ಕಿ ಉತ್ಸವದ ಸೇವಾಕಾರ್ಯವನ್ನು ನಡೆಸುತ್ತಾ ಬಂದಿದ್ದಾರೆ. ಗಮನಾರ್ಹವಾಗಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ೧೧೧ನೇ ಜನ್ಮದಿನೋತ್ಸವ ಸಮಾರಂಭವು **ಶ್ರೀ ಗೋಸಲ ಸಿದ್ಧೇಶ್ವರ ವೇದಿಕೆ**ಯಲ್ಲಿ ಈ ಬಾರಿ ನಡೆದದ್ದು ತುಂಬಾ ಔಚಿತ್ಯಪೂರ್ಣವಾಗಿತ್ತು.

(ಸೋಗಲ, ಮುನಿವಳ್ಳಿ, ಮುರುಗೋಡ ವಲಯದ ಕ್ಷೇತ್ರಕಾರ್ಯಕ್ಕೆ ನೆರವಾದ ಭಾಷಾವಿಜ್ಞಾನಿ ಡಾ. ಸಂಗಮೇಶ ಸವದತ್ತಿ ಮಠ ಅವರಿಗೆ, ಸಿಂಗ್ರಿಹಳ್ಳೀ ಪಂಚಲಿಂಗೇಶ್ವರ ಗವಿದೇಗುಲದ ಸಂದರ್ಭದ ಕ್ಷೇತ್ರಕಾರ್ಯದಲ್ಲಿ ನೆರವಾದ ಸಿದ್ಧಗಂಗೆಯ ಶ್ರೀ ಎಂ. ರೇಣುಕಾರಾಧ್ಯ, ಶ್ರೀ ಕೆ.ಎಚ್. ಶಿವರುದ್ರಯ್ಯ, ಶ್ರೀ ಎಚ್.ಎಸ್. ಸಿದ್ಧಗಂಗಪ್ಪ, ನೆಲಮಂಗಲದ ಶ್ರೀ ಎಲ್. ರಾಜಣ್ಣ ಅವರಿಗೆ ನನ್ನ ಕೃತಜ್ಞತೆಗಳು.)



# 'ಕರ್ನಾಟಕ'ದ ಭವಿಷ್ಯ – 'ಚಿಂತೆ' – 'ಚಿಂತನೆ'

– ಡಾ. ಎಂ. ಚಿದಾನಂದಮೂರ್ತಿ *

ಕನ್ನಡ-ಕನ್ನಡಿಗ ಕರ್ನಾಟಕಗಳ ಬಗ್ಗೆ 'ಚಿಂತೆ', 'ಚಿಂತನೆ' ಇಷ್ಟನ್ನೇ ಶೀರ್ಷಿಕೆ ಒಳಗೊಂಡಿದೆ. ಮೂರನೆಯ ಪದವೊಂದು ಅಗತ್ಯವಾಗಿದೆ. ಅದನ್ನು ನಾನು ಬೇಕೆಂದೇ ಸೇರಿಸಿಲ್ಲ. ಈ ಬರಹದ ಭಾಗವಾಗಿ ಮುಂದೆ ಅದು ಕಾಣಿಸಿಕೊಳ್ಳುತ್ತದೆ.

ಕನಿಷ್ಠ ಹತ್ತು ಹನ್ನೆರಡು ಅಚ್ಚ ಕನ್ನಡ ಜಿಲ್ಲೆಗಳನ್ನು ಕರ್ನಾಟಕ ಕಳೆದುಕೊಂಡು ಉದಯವಾಯಿತು. *''ಕಾವೇರಿ ಗೋದೆಯರು ಮೈದೊಳೆಯವ ನಲುನಾಡು''* ಆಗಿದ್ದ ಕರ್ನಾಟಕದಿಂದ ಗೋದಾವರಿ ಕಳಚಿಕೊಂಡಿತು. ಸದ್ಯ, ಕಾವೇರಿಯಾದರೂ ಉಳಿಯಿತಲ್ಲಾ ಎಂಬ ಸಮಾಧಾನ ಅಂದು ನಮ್ಮದಾಗಿತ್ತು. ಇದು ಗತಕಾಲದ ಚರಿತ್ರೆ ಅಲ್ಲ; ಕೇವಲ ನಲವತ್ತಾರು ವರ್ಷಗಳ ಹಿಂದಿನ ಮಾತು.

ರಾಷ್ಟ್ರ, ರಾಷ್ಟ್ರಾಭಿಮಾನ, ವಿಶ್ವಮಾನವ, 'ಜಾಗತಿಕ ಹಳ್ಳಿ' ಇತ್ಯಾದಿ ಮಾತುಗಳನ್ನು ಸದ್ಯಕ್ಕೆ ಪಕ್ಕಕ್ಕೆ ಇಟ್ಟು ಕರ್ನಾಟಕದತ್ತ ಕಣ್ಣು ಹಾಯಿಸೋಣ. ನಮ್ಮ ೧೯೫೬ರ ನಿರೀಕ್ಷೆ ಇಷ್ಟಾಗಿತ್ತು. *''ಈಗ ಆಗಿರುವ ಹತ್ತೊಂಬತ್ತು ಜಿಲ್ಲೆಗಳಲ್ಲಾದರೂ ಕನ್ನಡ ಸುರಕ್ಷಿತವಾಗಿರುತ್ತದೆ, ಅದು ಆಡಳಿತ ಭಾಷೆಯಾಗುತ್ತದೆ, ಶಿಕ್ಷಣ ಭಾಷೆಯಾಗುತ್ತದೆ. ಎಲ್ಲರೂ ಕನ್ನಡ ಮಾತನಾಡುತ್ತಾರೆ, ಅಥವಾ ಎಲ್ಲರಿಗೂ ಕನ್ನಡ ಗೊತ್ತಿರುತ್ತದೆ. ಕನ್ನಡಿಗ ಆತ್ಮಾಭಿಮಾನವನ್ನು ಬೆಳೆಸಿಕೊಂಡ ವ್ಯಕ್ತಿಯಾಗಿ ಬೆಳೆಯುತ್ತಾನೆ, ಅವನ ಹೊಲ, ಗದ್ದೆ, ತೋಟ, ನಿವೇಶನಗಳು ಅವನ ಕೈಲಿರುತ್ತವೆ, ವ್ಯಾಪಾರ, ಕೈಗಾರಿಕೆ, ಅಧಿಕಾರ ಅವನ ಕೈಲಿರುತ್ತದೆ, ಕರ್ನಾಟಕದ ಎಲ್ಲ ಶಿಕ್ಷಣಾವಕಾಶಗಳೂ ಅವನಿಗೆ ಲಭ್ಯವಾಗುತ್ತವೆ, ರಾಷ್ಟ್ರಮಟ್ಟದಲ್ಲಿ ಅವನಿಗೆ ದೊರಕಬೇಕಾದ ಎಲ್ಲ ಸ್ಥಾನಗಳೂ ಅವನಿಗೆ ದೊರಕುತ್ತವೆ. ಕರ್ನಾಟಕದ ಗಡಿಗಳು ಭದ್ರವಾಗಿರುತ್ತವೆ. ಕರ್ನಾಟಕದ ನದಿಗಳ ನೀರಿನಲ್ಲಿ ಅವನಿಗೆ ಸಲ್ಲಬೇಕಾದ್ದು ಸಲ್ಲುತ್ತದೆ, ರಾಷ್ಟ್ರದ ಇತರ ಪ್ರಾಂತ್ಯಗಳಿಗೆ ಸಮಾನವಾಗಿ ಕರ್ನಾಟಕ ಅಭಿವೃದ್ಧಿ ಹೊಂದುತ್ತದೆ''* ಇತ್ಯಾದಿ, ಇತ್ಯಾದಿ. ಅಂದಿನ ನಮ್ಮ ನಿರೀಕ್ಷೆಯಲ್ಲಿ ಅನ್ಯಾಯವಾದುದು ಅಸಾಧ್ಯವಾದುದು ಯಾವುದೂ ಇರಲಿಲ್ಲ, ಒಂದು ಗಣರಾಜ್ಯದ ಭಾಗವಾಗಿ ಕರ್ನಾಟಕ ಉಳಿದ ರಾಜ್ಯಗಳಂತೆ ಬೆಳೆಯಬೇಕು ಎಂಬ ಅಪೇಕ್ಷೆಯಲ್ಲಿ ತಪ್ಪು ಏನಿದೆ?



*''................ ಸರಕಾರಗಳಾಗಲಿ, ವಿದ್ಯಾಭ್ಯಾಸ ಇಲಾಖೆಗಳಾಗಲಿ, ವಿಶ್ವವಿದ್ಯಾನಿಲಯಗಳಾಗಲಿ, ಇತರ ಸಾಂಸ್ಕೃತಿಕ ಸಂಸ್ಥೆಗಳಾಗಲಿ, ಕಡೆಗೆ ವ್ಯಾಪಾರ ವಾಣಿಜ್ಯಾದಿ ಸಂಸ್ಥೆಗಳಾಗಲಿ ದೇಶ ಭಾಷೆಗೇ ಮೊತ್ತಮೊದಲನೆಯ ಸ್ಥಾನ ಕೊಡಬೇಕು. ಹಾಗೆ ಮಾಡದಿದ್ದರೆ ಪ್ರಜಾಪ್ರಭುತ್ವದ ಬುಡದ ಬೇರಿಗೆ ಬೆನ್ನೀರೆರೆದಂತಾಗುತ್ತದೆ. ನಮ್ಮ ಭಾಷೆ ವಿದ್ಯಾಭ್ಯಾಸದ ಅತ್ಯುನ್ನತ ಮಟ್ಟಗಳಲ್ಲಿಯೂ ಶಿಕ್ಷಣ ಮಾಧ್ಯಮವಾಗಲು ಸಮರ್ಥವಾಗಿದೆ ಎನ್ನುವುದರ ಬಗೆಗೆ ಯಾರೂ ಸಂದೇಹ ಪಡಬೇಕಾಗಿಲ್ಲ.''*

– ರಾಷ್ಟ್ರಕವಿ ಕುವೆಂಪು

***ಚಿಂತೆ-ಚಿಂತನೆ-ಕ್ರಿಯಾಶೀಲತೆ***

ಈ ನಲವತ್ತಾರು ವರ್ಷಗಳಲ್ಲಿ ಏನಾಗಿದೆ? ಒಂದು ಮಾತಲ್ಲಿ ಹೇಳುವುದಾದರೆ, ಎಲ್ಲವೂ ತಲೆಕೆಳಗಾಗಿದೆ. ''ಎಲ್ಲವೂ ಎಂದರೆ ಎಲ್ಲವೂ''. ಕರ್ನಾಟಕವನ್ನು ಭದ್ರಗೊಳಿಸುವ, ಕನ್ನಡವನ್ನು ಬೆಳೆಸುವ, ಕನ್ನಡಿಗನನ್ನು ಆರ್ಥಿಕವಾಗಿ ಬಲಿಷ್ಠನಾಗಿ ಮಾಡುವ ಯಾವುದೇ ಕೆಲಸವೂ ಕಾಣುತ್ತಿಲ್ಲ. ಕರ್ನಾಟಕದ ಇಂದಿನ ಶ್ರೀಮಂತಿಕೆ ಎಂದರೆ ಹೊರಗಿನಿಂದ ಬಂದವರ ಶ್ರೀಮಂತಿಕೆ. ಯಾವ ಜನಾಂಗದ ಆರ್ಥಿಕ ದೃಢತೆಯನ್ನು ಪಡೆಯುವುದಿಲ್ಲವೋ ಅದು ಎಂದಿಗೂ ಆತ್ಮ ವಿಶ್ವಾಸವನ್ನು ಪಡೆಯಲಾರದು. ನದಿ ನೀರು, ಉದ್ಯೋಗಾವಕಾಶ, ಉದ್ಯಮಶೀಲತೆ, ಸಮೂಹ ಮಾಧ್ಯಮಗಳು, ಶಿಕ್ಷಣ ಮಾಧ್ಯಮ, ವೃತ್ತಿಪರ ಶಿಕ್ಷಣ ಸಂಸ್ಥೆಗಳಲ್ಲಿ ಸ್ಥಾನಗಳು, ರೈಲ್ವೆ, ರಾಷ್ಟ್ರೀಯ ಹೆದ್ದಾರಿ ಎಲ್ಲ ಕಡೆ ಕನ್ನಡ-ಕನ್ನಡಿಗ-ಕರ್ನಾಟಕಗಳಿಗೆ ನಿರಂತರ ಆಘಾತ. ಆ ಎಲ್ಲ ಸಮಸ್ಯೆಗಳನ್ನು ವಿವರಿಸ ಹೋಗುವುದಿಲ್ಲ – ಎಲ್ಲರಿಗೂ ತಿಳಿದೇ ಇದೆ. ಈ ಬಗ್ಗೆ ಚಿಂತನ ಮಾಡಬೇಕಾಗಿದೆ; ಚಿಂತೆ ಮಾಡಬೇಕಾಗಿದೆ. ಬಹುತೇಕ ಯಾರಿಗೂ ಕರ್ನಾಟಕದ ಬಗ್ಗೆ ಚಿಂತೆ ಇಲ್ಲ; ಮುಂದಿನ ಶತಮಾನದ ಹೊತ್ತಿಗೆ ಕರ್ನಾಟಕದ ಗತಿ ಏನಾಗಬಹುದು? ಎಂಬ ಮಾತಿರಲಿ ಈಗಾಗಲೇ ಒಳಗೆ ಏನಾಗಿದೆ ಎಂಬ ಬಗ್ಗೆ ಚಿಂತೆ ಬಹಳ ಜನಕ್ಕಿಲ್ಲ. *''ಏನೋ ಆಗುತ್ತಿದೆ, ಏನೂ ಮಾಡಲಿಕ್ಕಾಗುವುದಿಲ್ಲ, ಹೇಗೋ ತಾನು ಗಟ್ಟಿಯಾದರೆ ಸಾಕು''* ಎಂಬ ಯೋಚನೆ ಬಹಳ ಜನಕ್ಕೆ. ''ಚಿಂತೆ'' ಕೆಲವರಿಗೆ ಉಂಟು. ಅವರಲ್ಲಿ ಬಹುಪಾಲು ಜನ ಕಾರ್ಮಿಕರು – ಅವರಿಗೆ ಕರ್ನಾಟಕದ ಬಗ್ಗೆ ಪ್ರೀತಿ ಉಂಟು – ಒಳಗಿನ ನೋವು ಗೊತ್ತು, ಅವರಿಗೆ ಹಲವರಿಗೆ *''ಚಿಂತೆ''* ಇದೆ – ಆದರೆ *''ಚಿಂತನ''* ಮಾಡಲಾರರು. ಅವರು ಅಂತಹ ದೊಡ್ಡ ವಿದ್ಯಾವಂತರಲ್ಲ. ಹಲವು ಪುಸ್ತಕಗಳನ್ನು ಓದಿಕೊಂಡ ಕೆಲವು ಜನ ದೊಡ್ಡ ವಿದ್ಯಾವಂತರು ಇದ್ದಾರೆ – *''ಚಿಂತನೆ''* ಮಾಡಬಲ್ಲವರು ಅವರು. ಅವರಿಗೆ ಕರ್ನಾಟಕದ ಬಗ್ಗೆ ಚಿಂತೆ ಇಲ್ಲ. (ಅವರಲ್ಲಿ ಬಹಳ ಜನಕ್ಕೆ ಇರುವ *''ಚಿಂತೆ''* ತಮ್ಮ ಸ್ವಂತದ್ದು ಎಂದರೆ ಅದು ವ್ಯಂಗ್ಯದ ಮಾತಾಗುವುದಿಲ್ಲ, ಅದು ಒಂದು ಕಠಿಣ ವಾಸ್ತವ.) ಹೀಗೆ *''ಚಿಂತೆ''*, *''ಚಿಂತನೆ''* ಮಾಡುವರ ವರ್ಗಗಳನ್ನು ಕಟ್ಟುನಿಟ್ಟಾಗಿ ಗೆರೆ ಎಳೆದು ತೋರಿಸಲಾಗದಿದ್ದರೂ ಸ್ಥೂಲವಾಗಿ ಅಂತಹ ಎರಡು ವರ್ಗಗಳು ಇರುವುದು ನಿಜ.



*''................ ನಮ್ಮ ಸಾಹಿತ್ಯ, ಇತಿಹಾಸ, ಸಂಸ್ಕೃತಿಯನ್ನು ನಾನು ದುರ್ಲಕ್ಷ್ಯ ಮಾಡಿದಷ್ಟು ಮುಂಬರುವ ಯಾವ ಜನಾಂಗವೂ, ರಾಷ್ಟ್ರವೂ ಮಾಡಿರಲಾರದು........... ನಮ್ಮ ಸಾಹಿತ್ಯ ಸಂಸ್ಕೃತಿ, ಇತಿಹಾಸಗಳ ಸಂಜೀವವನ್ನುಣ್ಣದೆ ನಾವು ಕನ್ನಡಿಗರಾಗಲಾರೆವು .... ಕನ್ನಡದ ಇಪ್ಪತ್ತೆಂಟು ಸಾವಿರ ಹಳ್ಳಿಗಳಿಗೆ ಸಾಹಿತ್ಯ, ಸಂಸ್ಕೃತಿ ಹೆಚ್ಚುವುದು ಎಂದು? ಕನ್ನಡ ನಾಡಿಗೇ ನಾಡೇ ಎಚ್ಚರವುದು ಎಂದು?...''*

– ವರಕವಿ ದ.ರಾ. ಬೇಂದ್ರೆ

ಈ ಎರಡು ವರ್ಗಗಳಲ್ಲಿ ಚಿಂತನೆ ಮಾಡುವವರನ್ನು ''ಚಿಂತೆ''ಗೆ ಒಳಗಾಗುವಂತೆ ಮಾಡುವುದೇ ಹೇಗೆ ಎಂಬುದೇ ನಮ್ಮ ಮುಂದಿರುವ ಸಮಸ್ಯೆ. ಚಿಂತನಶೀಲರಾಗಿರುವ ವ್ಯಕ್ತಿಗಳಿಗೆ ತಮ್ಮ ಪದವಿ, ಸ್ಥಾನ, ತಾವು ಚಿಂತನಶೀಲರು ಎಂಬ ಅರಿವು ಒಂದು ಬಗೆಯ ಅಹಮ್ಮನ್ನು ತಂದು ಕೊಟ್ಟಿರುತ್ತದೆ. ಉಳಿದ ವ್ಯಕ್ತಿಗಳ ಬಗ್ಗೆ ಅವರಿಗೆ ಕನಿಕರದ ಭಾವವೂ, ತಾವು ಹೇಳಿದ್ದೇ ಸರಿ ಎಂಬ ಸೂಕ್ಷ್ಮ ಜಂಬವೂ ಇರುತ್ತದೆ. ಅಂತಹ ಭ್ರಮೆಗಳಿಂದ ಮುಕ್ತರಾಗಿ ಹೊರ ಬರಲು ಅವರಿಗೆ ಕಷ್ಟವೂ ಆಗಿರುತ್ತದೆ.

''ಚಿಂತೆ''ಯ ''ಚಿಂತನೆ''ಯ ವ್ಯಕ್ತಿಗಳಂತೆಯೇ ''ಕ್ರಿಯೆ''ಯ ವ್ಯಕ್ತಿಗಳೂ ಅಗತ್ಯ. ಆ ಕ್ರಿಯಾತ್ಮಕ ವ್ಯಕ್ತಿ ''ಚಿಂತೆ''ಯನ್ನು ಹಚ್ಚಿಕೊಂಡು ಚಿಂತನಶೀಲನಾಗಿ, ಕೊರತೆಯನ್ನು ಹೋಗಲಾಡಿಸುವಲ್ಲಿ, ಸಮಸ್ಯೆಯನ್ನು ಬಗೆಹರಿಸುವಲ್ಲಿ ನಿರ್ದಿಷ್ಟ ಕ್ರಮಗಳನ್ನು ಕೈಗೊಳ್ಳುವವನಾಗಿರುತ್ತಾನೆ. ಅಂತಹ ವ್ಯಕ್ತಿಗಳ ಕೊರತೆ ಯಾವ ಕಾಲಕ್ಕೂ ಇದ್ದದ್ದೇ. ಅವನಿಗೆ ಕೇವಲ ಶುದ್ಧ ಆಲೋಚನೆಯಲ್ಲಿ ನಂಬಿಕೆ ಇಲ್ಲ, ಆ ಆಲೋಚನೆ ಕ್ರಿಯೆಯಾಗಿ, ಪರಿಣಾಮವಾಗಿ, ಫಲವಾಗಿ ಪರಿವರ್ತಿತವಾದಾಗಲೇ ಸಮಾಧಾನ. ಅವನು ಕನಸುಗಾರನೂ ಹೌದು, ಕಟ್ಟುಗನೂ ಹೌದು.

''ಚಿಂತೆ'' ಮಾಡುವ ಜನ ಮತ್ತೆ ಮತ್ತೆ ಕರ್ನಾಟಕ ಅನುಭವಿಸುತ್ತಿರುವ ನೋವನ್ನು ವ್ಯಕ್ತಮಾಡುತ್ತಲೇ ಇದ್ದಾರೆ. ದುರ್ಬಲವಾಗಿಯಾದರೂ ಆ ನೋವಿನತ್ತ ಗಂಭೀರ ಗಮನವನ್ನು ಹರಿಸುವವರು ಮಾತ್ರ ಕಾಣದಾಗಿದ್ದಾರೆ.

ಎಲ್ಲ ಕಡೆಗೂ ಕರ್ನಾಟಕದಲ್ಲಿ ಕಾಣುತ್ತಿರುವ ಚಿತ್ರಣವೆಂದರೆ (ತಮ್ಮನ್ನು ಹೊರತುಪಡಿಸಿ) ಒಂದು ಬಗೆಯ ಅಸಡ್ಡೆ, ಆಲಸ್ಯ, ಕರ್ನಾಟಕದ ಆಡಳಿತ ಚುಕ್ಕಾಣಿ ಹಿಡಿದವರಿಗೆ *''ಹೀಗೆ ಆದರೆ ಮುಂದಿನ ಕರ್ನಾಟಕದ ಗತಿಯೇನು?''* ಎಂಬುದು ಒಂದು ಪ್ರಶ್ನೆಯಾಗಿಯೂ ಕಾಡುತ್ತಿಲ್ಲ, ಅಧಿಕಾರಿ ಗಳಿಗೆ, ಯೋಚನೆ ಮಾಡಬಲ್ಲ ಮತ್ತು ಬರೆಯಬಲ್ಲ ಜನಕ್ಕೆ ಕೂಡ ಅದು ಒಂದು ಪ್ರಶ್ನೆಯಾಗಿ ಕಾಡುತ್ತಿಲ್ಲ. ಈ ಬಗ್ಗೆ ಚಿಂತೆ ಅಗತ್ಯ. ಬರೀ ''ಚಿಂತೆ'' ಅಗತ್ಯ. ಬರೀ ''ಚಿಂತನೆ''ಯಿಂದಲೂ ಪ್ರಯೋಜನವಿಲ್ಲ. ಈಗ ಬೇಕಾಗಿರುವುದು ಕ್ರಿಯೆ, ಕ್ರಿಯಾಶೀಲತೆ.

***ಸಂಘಟನೆ***

ಕ್ರಿಯಾಶೀಲತೆ ಎಂಬುದನ್ನು ಹೀಗೆ ವಿವರಿಸಬಹುದು. ಕರ್ನಾಟಕಕ್ಕೆ ಆಗಿರುವ ಆಗುತ್ತಿರುವ ಅನ್ಯಾಯಗಳನ್ನು ಕುರಿತಂತೆ ಜನತೆಗೆ ಅರಿವುಂಟು ಮಾಡಬೇಕು. ಸಭೆ, ಕರಪತ್ರ, ಕಿರುಕೃತಿಗಳ



*''.......... ಕನ್ನಡ ಜನಗಳ ಪಾಲಿಗೆ ಅದು ಕನ್ನಡ; ಆದೊಂದೇ. ಇಂಗ್ಲೀಷ್ ಅಲ್ಲ, ಹಿಂದೀ ಅಲ್ಲ. ಕನ್ನಡ ನಾಡಿನ ಜನಕ್ಕೆ ಕನ್ನಡ ವೊಂದೇನೆ. ಕನ್ನಡ ಜನಕ್ಕೆ ಕನ್ನಡ ಭಾಷೆ ಬದುಕಿನ ಉಸಿರು. ಕನ್ನಡ ಹಿಂದೆ ಆಳಿದ ಭಾಷೆ ಯಾಗಿತ್ತು. ಇನ್ನು ಆಳುವ ಭಾಷೆಯಾಗಬಲ್ಲದು. ಆಗ ಬೇಕು. ನಮ್ಮ ವಿಶ್ವವಿದ್ಯಾಲಯಗಳ ಶಿಕ್ಷಣ ಮಾಧ್ಯಮ, ನಮ್ಮ ಯಾವತ್ತೂ ಶಿಕ್ಷಣ ಮಾಧ್ಯಮ ಕನ್ನಡವೇ ಆಗಬೇಕು.''*

– ಡಾ. ಶಿವರಾಮ ಕಾರಂತ

* ಖ್ಯಾತ ಸಂಶೋಧಕರು, 'ಮಿಂಚು', ನಂ. ೧೦೧೩/ಬಿ, ೪ನೇ ಅಡ್ಡರಸ್ತೆ, ೧೧ನೇ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು-೧೦೪



"………. ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಲು ಆಂಗ್ಲ ಅಧಿಕಾರಿಗಳು ಪ್ರಾಮಾಣಿಕ ಪ್ರಯತ್ನ ಮಾಡಿ ಇತರರಿಗೆ ಮಾರ್ಗದರ್ಶಕರಾಗಿದ್ದಾರೆ. ಅವರು ಕನ್ನಡವನ್ನು ಕಲಿತು ಕನ್ನಡ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಆಡಳಿತದ ಎಲ್ಲಾ ಹಂತಗಳಲ್ಲಿಯೂ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಲು ಶ್ರಮಿಸಿದರು. ಅವರಲ್ಲಿ ಗೋರ್ಡನ್, ಥಾಮ್ಸನ್, ಕ್ಯಾಪ್ಟನ್ ಡಿಕ್ಸನ್, ಎಫ್.ಹೆಚ್.ಬಿ. ಗೋರ್ಡನ್, ಎ.ಜಿ.ಡಿ. ಲೋಗನ್, ಮೇಜರ್ ಹಿಲ್ಸ್, ಮ್ಯಾಕ್ ಹುಚಿನ್, ಪಿ.ಬಿ. ಕ್ಲಾರ್ಕ್, ರಿಕೆಟ್ಸ್ ಮೊದಲಾದವರು ಸೇರಿದ್ದಾರೆ. ಆಂಗ್ಲರ ಆಡಳಿತದಲ್ಲಿ ಕನ್ನಡವನ್ನು ಬಳಸುವುದು ಅಗತ್ಯವೆಂಬುದು ಆಂಗ್ಲ ಅಧಿಕಾರಿಗಳಿಗೆ ಮನವರಿಕೆಯಾಗಿತ್ತು. ೧೭೬೧ರಿಂದ ೧೮೨೭ರವರೆಗೆ ಅಧಿಕಾರಿಯಾಗಿದ್ದ ಸರ್ ಥಾಮಸ್ ಮನ್ರೋ ಪ್ರಾದೇಶಿಕ ಭಾಷೆಗಳ ಉದಾರದ ಬಗ್ಗೆ ಅತ್ಯಂತ ಆಸಕ್ತಿ ತೋರಿದ ಈತ ಕನ್ನಡ ಪ್ರದೇಶಗಳನ್ನೆಲ್ಲ ಒಂದೇ ಆಡಳಿತದಲ್ಲಿ ಒಟ್ಟುಗೂಡಿಸಬೇಕೆಂದು ಸೂಚಿಸಿದವರಲ್ಲಿ ಮೊದಲಿಗ. ನಂತರ ಬಂದ ಮಾರ್ಕ್ ವಿಕ್ಸ್, ಕಾಲಿನ್ ಮಕ್‌ಝಿ, ಬುಕಾರಿನ್, ಜಾನ್ ಮೆಕ್ಕರಲ್, ಮಾರ್ಕ್ ಕಬ್ಬನ್, ಲೆಲಿನ್ ಬೆಂಥಮ್ ಬೌರಿಂಗ್, ಬೆಂಜಮಿನ್ ಲೂಯಿಸ್ ರೈಸ್, ಎಲ್. ರಿಕೆಟ್ಸ್, ಟಿ.ಜಿ. ಕ್ಲಾರ್ಕ್, ಅರ್ಥರ್ ಹೆನ್ರಿ ಕೋಲ್ ಮೊದಲಾದವರು ಕನ್ನಡವನ್ನು ತಮ್ಮ ಆಡಳಿತದಲ್ಲಿ ಬಳಸಿದ ಅಧಿಕಾರಿಗಳು. ಈ ಅಧಿಕಾರಿಗಳ ದೃಢನಿಶ್ಚಯ, ಆಡಳಿತದಲ್ಲಿ ನಿಷ್ಠೆ, ಭಾಷೆಗಳ ಪ್ರೇಮ, ಜನತೆಯ ಆಶೋತ್ತರಗಳನ್ನು ಈಡೇರಿಸುವಲ್ಲಿ ಅವರು ತೋರಿದ ನಿಷ್ಠೆಯನ್ನು ಕಂಡ ಕನ್ನಡಿಗರು ತಲೆಯನ್ನು ತಗ್ಗಿಸಿದಂತಾಗಿದೆ. ಸಾವಿರಾರು ಮೈಲಿಗಳಿಂದ ಕರ್ನಾಟಕಕ್ಕೆ ಬಂದು ಹಾಗೂ ಕನ್ನಡವನ್ನು ಎಂದೂ ಅರಿಯದ ಆಂಗ್ಲ ಅಧಿಕಾರಿಗಳಿಂದ ಸಾಧ್ಯವಾದ ಆಡಳಿತಾತ್ಮಕ ಕನ್ನಡ ಬಳಕೆ ಇಂದು ಕನ್ನಡಿಗರೇ ಆದ ನಮಗೆ ಏಕೆ ಸಾಧ್ಯವಾಗುತ್ತಿಲ್ಲ?

– ಡಾ. ಮಹದೇವ ಬಣಕಾರ

ಮೂಲಕ ಅದನ್ನು ಮತ್ತೆ ಮತ್ತೆ ಜನತೆಗೆ ತಿಳಿಸಬೇಕು. ಇದು ಒಬ್ಬರ ಕೈಯಿಂದ ಸಾಧ್ಯವಿಲ್ಲ. ಒಂದು ಸಂಘಟನೆಯಿಂದ ಮಾತ್ರ ಸಾಧ್ಯ. ಸಂಘಟನೆಯೆಂದರೆ ಒಬ್ಬ ವ್ಯಕ್ತಿ ಒಂದು ಮೇಟಿಯಾಗಿ, ಆಧಾರಸ್ತಂಭವಾಗಿ ನಿಂತಿರುವ ಒಂದು ಧ್ಯೇಯಕ್ಕಾಗಿ ಟೊಂಕ ಕಟ್ಟಿರುವ ಕಾರ್ಯಕರ್ತರ ತಂಡ. ಯಾರು ಏನೇ ಹೇಳಲಿ, ರಾಷ್ಟ್ರೀಯ ಸ್ವಯಂಸೇವಕ ಸಂಘದಂತಹ ಶಿಸ್ತುಬದ್ಧ ಸಂಘಟನೆ ಕರ್ನಾಟಕಕ್ಕೆ ತೀರ ಅಗತ್ಯವಾಗಿದೆ. ಆ ಸಂಘಟನೆ ಕರ್ನಾಟಕದಾದ್ಯಂತ ತನ್ನ ಶಾಖೆಗಳನ್ನು ಹಬ್ಬಿಸಬೇಕು.

ಸಂಘಟನೆಯನ್ನು ಕಟ್ಟುವುದು ಅತ್ಯಂತ ಶ್ರಮದ, ನಿಷ್ಠುರದ ಕೆಲಸ. ಆದರೆ ಆಗಲೇಬೇಕಾಗಿದೆ. ಕನ್ನಡಿಗರಲ್ಲಿ ಸಾರ್ವತ್ರಿಕ ಎಚ್ಚರ ಮೂಡಿತೋ ಕನ್ನಡಿಗ ಉಳಿಯುತ್ತಾನೆ, ಕನ್ನಡ, ಕರ್ನಾಟಕಗಳು ಉಳಿಯುತ್ತವೆ. ಇಲ್ಲದಿದ್ದರೆ ಸರ್ವನಾಶ. ಈ ಬಗ್ಗೆ ಇನ್ನೊಬ್ಬರನ್ನು ತೆಗಳಿ ಪ್ರಯೋಜವಿಲ್ಲ. ಇಂದು ಕರ್ನಾಟಕವನ್ನು ಪ್ರೀತಿಸುವ ಪ್ರತಿಯೊಬ್ಬನೂ ಪ್ರಶ್ನೆ ಹಾಕಿಕೊಳ್ಳಬೇಕಾಗಿದೆ. ನಾನು ನನ್ನ ಆದಾಯದ ಒಂದು ಭಾಗವನ್ನು ಎಷ್ಟರ ಮಟ್ಟಿಗೆ ಕರ್ನಾಟಕಕ್ಕಾಗಿ ವಿನಿಯೋಗಿಸಿ ಕೊಳ್ಳುತ್ತಿದ್ದೇನೆ. ಪ್ರತಿಯೊಬ್ಬನೂ ಈ ಪ್ರಶ್ನೆ ಹಾಕಿಕೊಳ್ಳಬೇಕು ಎಂದು ಒತ್ತಿ ಹೇಳುತ್ತೇನೆ. ಆಗ ಸಂಘಟನೆ ಕಟ್ಟುವುದು ಕಷ್ಟ ಸಾಧ್ಯ ಕೆಲಸ ಆಗುವುದಿಲ್ಲ. ಜನತೆಯ ಅಭೀಪ್ಸೆ ತೀವ್ರವಾದಲ್ಲಿ, ಸಂಘಟನೆಯನ್ನು ಕಟ್ಟಬಲ್ಲ ಒಬ್ಬ ಸಮರ್ಥ ತ್ಯಾಗಿ ಮುಂದೆ ಬರುತ್ತಾನೆ.

ನನಗೇನೋ ನಂಬಿಕೆ ಇದೆ. ಕರ್ನಾಟಕದ ಈಗಿನ ನಿರಾಸೆಯ ಮಂಜಿನ ಮೂಲಕವೇ ಭರವಸೆಯ ಸೂರ್ಯ ಮೂಡಿ ಬರುತ್ತಾನೆ.





"………. ಈಗ ಮಾಡಿರುವುದಕ್ಕಿಂತ ಹೆಚ್ಚಾದ ಕೆಲಸವನ್ನು ಮಾಡದೆ ಇರುವುದಕ್ಕೆ ವಿದ್ಯಾವಂತರಾದ ಕನ್ನಡಿಗರ ಔದಾಸೀನ್ಯವೇ ಮುಖ್ಯ ಕಾರಣ … ನಮ್ಮ ಹೃದಯದಲ್ಲಿ ಕನ್ನಡಕ್ಕೆ ಸರಿಯಾದ ಸ್ಥಾನ ಇನ್ನೂ ದೊರೆತಿಲ್ಲ. ಹಿಂದೆ ಸಂಸ್ಕೃತದಿಂದ, ಈಚೆಗೆ ಇಂಗ್ಲೀಷಿನಿಂದ ಕನ್ನಡವು ಕಡೆಗೆ ಬಿತ್ತು …. ನಮಗೆ ನಮ್ಮ ಭಾಷೆ ದೇವಭಾಷೆ ಎಂಬ ಮಮತೆ ಇರಬೇಕು … ನಮ್ಮ ನಾಡ ಜನರೆಲ್ಲ ಕನ್ನಡವನ್ನು ಚೆನ್ನಾಗಿ ಕಲಿಯಬೇಕು … ಕನ್ನಡವನ್ನು ಪ್ರಪಂಚದ ಪ್ರಮುಖ ಭಾಷೆಗಳಲ್ಲಿ ಒಂದೆನ್ನುವುದು ನಮ್ಮೆಲ್ಲರ ಕರ್ತವ್ಯ … ನಾವು ಕನ್ನಡ ಭಾಷೆಗೆ ವಿದ್ಯಾಭ್ಯಾಸದಲ್ಲಿ ಸರಿಯಾದ ಸ್ಥಾನವನ್ನು ಕಲ್ಪಿಸಬೇಕು … ವಿದ್ಯೆಯಿಂದ ಮನುಷ್ಯನಿಗೆ ಭಾವ ವಿಕಾಸವಾಗಬೇಕು. ಇದು ಮಾತೃಭಾಷೆಯಿಂದ ಆಗುವಂತೆ ಇನ್ನು ಯಾವ ಭಾಷೆಯಿಂದಲೂ ಆಗಲಾರದು … ಕನ್ನಡವೇ ನಮಗೆಲ್ಲ ಭಾಷೆ. ಅದನ್ನು ಬಿಟ್ಟರೆ ನಮಗೆ ಬರೆಯುವ ಭಾಷೆಯಿಲ್ಲ; ಅದನ್ನು ಬಿಟ್ಟರೆ ನಮಗೆ ಓದುವ ಭಾಷೆಯಿಲ್ಲ ಎಂದು ನಿರ್ಧಾರ ಮಾಡಿ ಕನ್ನಡವನ್ನು ನಾವೆಲ್ಲ ಹಿರಿದಾಗಿ ಮಾಡಬೇಕು …..''

– ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್







# ಕನ್ನಡ ನಾಡು-ನುಡಿ

– ಟಿ.ಆರ್. ಮಹಾದೇವಯ್ಯ *

ಕನ್ನಡನಾಡು ದಕ್ಷಿಣ ಭಾರತದಲ್ಲಿ ಕಾವೇರಿಯಿಂದ ಗೋದಾವರಿ ನದಿಯವರೆಗೆ ಹಬ್ಬಿದ ದೇಶ. ಬಿಜಾಪುರ ಜಿಲ್ಲೆಯ ಪಟ್ಟದಕಲ್ಲು, ರಾಯಚೂರು ಜಿಲ್ಲೆಯ ಕೊಪ್ಪಳ, (ಈಗ ಕೊಪ್ಪಳ ಪ್ರತ್ಯೇಕ ಜಿಲ್ಲೆಯಾಗಿದೆ) ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರ ಮತ್ತು ಬೆಳಗಾವಿ ಜಿಲ್ಲೆಯ ಒಂಕುಂದ – ಇವುಗಳ ನಡುವೆಯಿದ್ದ ಪ್ರದೇಶವೇ ತಿರುಳ್ಗನ್ನಡ ನಾಡು ಎಂದು ಕವಿರಾಜಮಾರ್ಗದಲ್ಲಿ ವಿವರವಿದೆ. ಕನ್ನಡ ನುಡಿಯನ್ನು ಮಾತನಾಡುವ ಜನರು ವಾಸ ಮಾಡುತ್ತಿರುವ ಈ ಭೂಭಾಗವನ್ನು ಕರುನಾಡು, ಕರಿನಾಡು, ಕಂನಾಡು, ಕರ್ನಾಟಕ ಎಂದು ಮುಂತಾಗಿ ಕರೆಯಲಾಗಿದೆ. ಅದನ್ನು ಹಾಗೆ ಕರೆಯಲು ಕಾರಣದ ವಿಶ್ಲೇಷಣೆ ಹೀಗಿದೆ :

***ಕರುನಾಡು***

'ಕರು' ಎಂದರೆ ಎತ್ತರ. ಎತ್ತರದ ನಾಡು. ದಖಿನ್ ಪ್ರಸ್ಥಭೂಮಿಯಿ ಮೇಲೆ ಇರುವ ಈ ದೇಶ ಸಮುದ್ರ ಮಟ್ಟಕ್ಕಿಂತ ಸಾಕಷ್ಟು ಎತ್ತರದಲ್ಲಿದೆ. 'ಕರು' ಪದಕ್ಕೆ ದೊಡ್ಡ, ಮಹಾ ಎಂಬರ್ಥವೂ ಉಂಟು. ನಾಡು ಮಾತ್ರ ಎತ್ತರವಲ್ಲ. ಅಲ್ಲಿ ಬಾಳುವ ಜನರೂ ಉನ್ನತರು, ಉಜ್ವಲ ಸಂಸ್ಕೃತಿವಂತರು ಎಂದರ್ಥ.

***ಕರ್‌ನಾಡು, ಕರಿನಾಡು***

ಕಪ್ಪುಮಣ್ಣಿನ ಭೂಮಿಯುಳ್ಳ ನಾಡು. ಅಂದರೆ ಫಲವತ್ತಾದ ಎರೆಭೂಮಿಯಿಂದ ಕೂಡಿದ ದೇಶ. ಕಪ್ಪು ಇಲ್ಲಿ ಫಲವತ್ತಿನ ಸಂಕೇತ. ಹುಲುಸಾದ ಬೆಳೆ ಸಿರಿಯ ನೀಡುವ ಭೂಮಿಯುಳ್ಳ ನಾಡು. ಈ ನೆಲದಲ್ಲಿ ಅರಳಿದ ಚೇತನಗಳೂ ಸಹ ಸಂಪನ್ನರು. ಮನುಜ ಮಾಂದಾತರು ಎಂದು ಅರ್ಥೈಸಬಹುದು.

***ಕಂನಾಡು***

ಕಮ್ಮಿತ್ತಾದ ದೇಶ. ಅಂದರೆ ಸುವಾಸನೆಭರಿತ ನಾಡು. ಈ ದೇಶದಲ್ಲಿ ಶ್ರೇಷ್ಠವಾದ ಶ್ರೀಗಂಧ ಬೆಳೆಯುತ್ತದೆ. ಹೂವುಗಳಲ್ಲಿ ಶ್ರೇಷ್ಠವಾದ ಮಲ್ಲಿಗೆ, ತಾವರೆಗಳು, ಹಣ್ಣುಗಳಲ್ಲಿ ಶ್ರೇಷ್ಠವಾದ ಮಾವುಗಳು ಇಲ್ಲಿ ಬೆಳೆಯುತ್ತವೆ. ಆದ್ದರಿಂದ ಇಲ್ಲಿ ನರುಗಂಪು ತುಂಬಿ ಸೂಸುತ್ತದೆ. ಅದರಂತೆಯೇ ಈ ನೆಲದಲ್ಲಿ ಹುಟ್ಟಿ ಬೆಳೆದ ಜನರೂ ಸಹ ತಮ್ಮ ಗುಣ ಮೌಲ್ಯಗಳಿಂದ, ಅನುಕರಣೀಯ ಆದರ್ಶ ಬದುಕಿನಿಂದ ಕೀರ್ತಿ ಪರಿಮಳವನ್ನು ಹರಡಿದ್ದಾರೆ ಎಂದರ್ಥ.

***ಕರ್ನಾಟಕ***

ಸಂಸ್ಕೃತದ ಈ ಪದಕ್ಕೆ ''ಕರ್ಣೇಷು ಅಟತಿ ಇತಿ ಕರ್ಣಾಟಃ'' ಎಂದು ನಿಷ್ಪತ್ತಿ ಹೇಳಿದೆ. ಅಂದರೆ ಯಾವ ದೇಶದ ಕೀರ್ತಿ ಎಲ್ಲರ ಕಿವಿಯಲ್ಲೂ ಮೊಳಗುತ್ತಿರುವುದೋ ಆ ದೇಶ ಎಂದರ್ಥ. ಕನ್ನಡನಾಡಿನ ಅಗ್ಗಳಿಕೆ ಎಷ್ಟಿತ್ತೆಂದರೆ ಎಲ್ಲರೂ ಅದರ ಹಿರಿಮೆಯನ್ನು ಕುರಿತು ಮಾತನಾಡಿಕೊಳ್ಳುತ್ತಿದ್ದರು – ಇಂಥ ಹಲವಾರು ಅರ್ಥ ವಿವರಣೆಗಳು ನಮ್ಮ ನಾಡಿನ ಹೆಸರಿನ ಬಗ್ಗೆ ಇವೆ. ಈ ನಾಡಿಗೆ ಕರೆದಿರುವ ಹೆಸರುಗಳೆಲ್ಲವೂ ಅನ್ವರ್ಥಕ ನಾಮಗಳೇ. ಕನ್ನಡನಾಡಿನ ಮೇಲ್ಮೈ ಲಕ್ಷಣಗಳು. ಅಲ್ಲಿ ಅರಳಿ ಬಾಳಿದ ವಿವಿಧ ಸಂಸ್ಕೃತಿಗಳು, ನಾಡವರ ಆದರ್ಶದ ಬದುಕು ನಾಡಿನ ಹೆಸರಿನ ಯಥಾರ್ಥತೆಯನ್ನು ಸಾರುವಂತಿದೆ.

ನಮ್ಮ ನಾಡಿಗೆ ಎರಡು ಸಹಸ್ರವರ್ಷಗಳಿಗಿಂತಲೂ ಹೆಚ್ಚಿನ ಭವ್ಯ ಇತಿಹಾಸವಿದೆ. ಕರ್ನಾಟಕವನ್ನು ಆಳಿದ ರಾಜಮನೆತನಗಳು ನಾಡಿನ ಸರ್ವತೋಮುಖ ಅಭಿವೃದಿಗೆ ಶ್ರಮಿಸಿರುವುದನ್ನು ಇತಿಹಾಸ ದಾಖಲಿಸಿದೆ. ಕರ್ನಾಟಕ ಸಂಪರ್ಕ ಹೊಂದಿ ಅಧಿಕಾರ ನಡೆಸಿದ ಪ್ರಥಮ ರಾಜವಂಶವೆಂದರೆ ಮೌರ್ಯರು, ಅನಂತರ ಶಾತವಾಹನು, ಚುಟುಗಳು, ಬಾಣರು, ಅಳುಪುರು, ಸೇಂದ್ರರು, ಪುನ್ನಾಡರು, ಗಂಗರು, ಚಾಳುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು, ಕೆಳದಿಯ ಅರಸರು, ಕೊನೆಗೆ ಯದುವಂಶದವರು ಈ ನಾಡನ್ನು ಆಳಿದರು. ಹೀಗೆ ವಿವಿಧ ರಾಜವಂಶದವರು ಈ ನಾಡನ್ನು ಆಳಿದರು. ಹೀಗೆ ವಿವಿಧ ರಾಜವಂಶದವರ ಆಳ್ವಿಕೆಗೆ ಒಳಪಡುತ್ತಾ ಬಂದಿದ್ದರೂ ನಮ್ಮ ನಾಡು ತನ್ನ ಅಖಂಡತೆಯನ್ನು, ಸಾಂಸ್ಕೃತಿಕ ಐಕ್ಯತೆಯನ್ನು ಉಳಿಸಿಕೊಂಡು ಬಂದಿದೆ.

* ಪ್ರಸಿದ್ಧ ವಿದ್ವಾಂಸರು, ಬೆಂಗಳೂರು

ಆನಂತರದ ವರ್ಷಗಳಲ್ಲಿ ಕನ್ನಡ ನಾಡಿನ ಪ್ರದೇಶಗಳು ಬೇರೆ ಬೇರೆ ಪ್ರಾಂತಗಳಿಗೆ ಸೇರಿ ಹರಿದು ಹಂಚಿ ಹೋಯಿತು. ಬ್ರಿಟಿಷರ ಆಳ್ವಿಕೆಯಲ್ಲಿ ಅದು ಮತ್ತಷ್ಟು ಛಿದ್ರವಾಗಿ ಹೋಯಿತು. ತಮಿಳುನಾಡು, ಕೇರಳ, ಆಂಧ್ರಪ್ರದೇಶ, ಮಹಾರಾಷ್ಟ್ರ ರಾಜ್ಯಗಳಿಗೆ ಸೇರಿದ ಕನ್ನಡ ನೆಲದ ಜನರು ತೊಂದರೆಗೊಳಗಾದರು. ಆಳ್ವಿಕೆಯ ಕೃಪಾಛತ್ರದಡಿ ಬಾಳಬೇಕೆಂಬ ಬಯಕೆ ತೀವ್ರವಾಗಿ ಏಕೀಕರಣದ ಹೋರಾಟ ನಡೆಯಿತು. ಸ್ವಾತಂತ್ರ್ಯಾನಂತರ ಭಾಷಾವಾರು ಪ್ರಾಂತ ಪುನರ್ವಿಂಗಡಣೆಯಲ್ಲಿ ವಿಶಾಲರಾಜ್ಯ ನಿರ್ಮಾಣವಾಗಿ ನಾಡು ಒಂದಾಯಿತು. ಇಷ್ಟಾದರೂ ನಮ್ಮ ನಾಡಿಗೆ ಸೇರಬೇಕಾದ ಅನೇಕ ಭಾಗಗಳು ಹಾಗೇ ಉಳಿದಿವೆ. ಮಹಾಜನ ಆಯೋಗದ ವರದಿ ಜಾರಿಗೆ ಬಂದಿಲ್ಲ. ಗಡಿ ಹೊಂದಾಣಿಕೆಗಳ ಬಗ್ಗೆ ಪೂರ್ಣ ತೀರ್ಮಾನವಾಗಿಲ್ಲ.

ಕನ್ನಡನಾಡನ್ನು ಕುರಿತು ನಮ್ಮ ಕವಿಗಳು ವಿವಿಧ ರೀತಿಯಲ್ಲಿ ಬಣ್ಣಿಸಿದ್ದಾರೆ. ಬನವಾಸಿಯನ್ನು ವರ್ಣಿಸುವ ಸಂದರ್ಭದಲ್ಲಿ ಪಂಪಕವಿ ***'ಆರಂಕುಶ ವಿಟ್ಟೊಡಂ ನೆನೆವುದೆನ್ನಮನಂ ಬನವಾಸಿಯಂ'*** ಎಂದು ನಾಡಪ್ರೇಮವನ್ನು ವ್ಯಕ್ತಗೊಳಿಸಿದ್ದಾನೆ. ಹಲವು ನಾಲಗೆಯುಳ್ಳ ಆದಿಶೇಷನೇ ಕನ್ನಡ ನಾಡನ್ನು ವರ್ಣಿಸಲು ದಣಿಯುತ್ತಾನೆ. ಇನ್ನು ಸಾಮಾನ್ಯನಾದ ನಾನು ಹೇಗೆ ಬಣ್ಣಿಸಲಿ ಎಂಬ ಉದ್ಗಾರದೊಡನೆ ಕವಿ ಆಂಡಯ್ಯ **'ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು'** ಎಂದಿದ್ದಾನೆ. ಅದರಂತೆ ನಾಡವರ ಬಗ್ಗೆಯೂ ನಮ್ಮ ಕವಿಗಳು ಮನದುಂಬಿ ಹೇಳಿದ್ದಾರೆ. ಕನ್ನಡಿಗರು ಪದಗಳನ್ನು ತಿಳಿದು ಮಾತಿನಲ್ಲಿ ಬಳಸುತ್ತಾರೆ. ಮತ್ತು ಆಡಿದ ಮಾತನ್ನು ವಿಚಾರ ಮಾಡಲು ಸಹ ಸಮರ್ಥರಾಗಿ ತಮ್ಮ ಚದುರನ್ನು ಮೆರೆದಿದ್ದಾರೆ. ಅವರು ಎಂಥ ನಿಪುಣರೆಂದರೆ ಉದ್ದೇಶಪೂರ್ವಕ ಅಭ್ಯಾಸ ಮಾಡದೆ ಕಾವ್ಯ ಕಟ್ಟಿ ಹಾಡುವ ಸಾಮರ್ಥ್ಯವುಳ್ಳವರು ಎಂದು **'ಕವಿರಾಜಮಾರ್ಗ'** ಮೆಚ್ಚಿಗೆ ಮಾತನ್ನಾಡಿದರೆ, ಶಾಸನಗಳು ಕನ್ನಡಿಗರ ಗುಣಗಣಗಳನ್ನು ಮಾಡಿ ಹೊಗಳಿವೆ. ಕನ್ನಡಿಗರು ಪರಹಿತರು, ನುಡಿದು ತಪ್ಪದವರು, ಜ್ಞಾನನಿಧಿಗಳು, ಧರ್ಮಕ್ಕೆ ಆಗರವಾದವರು. ಗಂಡಸರು ಮನ್ಮಥ, ನಳರಂತೆ ಚೆನ್ನಿಗರು, ಶತ್ರು ಸೈನ್ಯವನ್ನು ಹಿಮ್ಮೆಟ್ಟಿಸುವಲ್ಲಿ ಷಣ್ಮುಖ- ಅರ್ಜುನರು, ಹೆಂಗಸರು ರತಿ, ರಂಭೆಯರಂತೆ ರೂಪಸಿಯರು, ಸರಸ್ವತಿ, ಲಕ್ಷ್ಮಿಯರಂತೆ ನುಡಿ-ಸಿರಿಯ ಶೋಭಿತೆಯರು ಎಂದು ಕೊಂಡಾಡಿದೆ.

ಇಂಥ ಸತ್ವಪೂರ್ಣವಾದ ಭಾಷೆಯಿಂದ ಮೂಡಿರುವ ಕನ್ನಡ ಸಾಹಿತ್ಯವು ಸಮೃದವಾಗಿದೆ. ನಮ್ಮ ಕವಿಗಳು ಜನರಿಗೆ 'ಇದು ಪಾಪ. ಇದು ಪುಣ್ಯ; ಇದು ಹಿತರೂಪದ್ದು, ಇದು ಅಹಿತ ಪ್ರಕಾರದ್ದು ಇದು ಸುಖ, ಇದು ದುಃಖವನ್ನು ಉಂಟು ಮಾಡುವಂಥದ್ದು ನೋಡಿ' ಎಂದು ತಿಳಿವನ್ನು ತಿದ್ದುವ ಉತ್ತಮೋತ್ತಮ ಕಾವ್ಯಗಳನ್ನು ನೀಡಿದ್ದಾರೆ ಎಂದಿದ್ದಾನೆ ಕವಿರಾಜಮಾರ್ಗಕಾರ.

ಹಲ್ಮಿಡಿ ಮತ್ತು ಬಾದಾಮಿ ಶಾಸನಗಳು ಕನ್ನಡ ಸಾಹಿತ್ಯದ ಮೊದಲ ಆಕರಗಳು. 'ಕವಿರಾಜಮಾರ್ಗ' ನಮಗೆ ದೊರಕಿರುವ ಮೊದಲ ಗ್ರಂಥ. ಇವನ್ನು ನೋಡಿದರೆ ಆ ವೇಳೆಗೆ ಕನ್ನಡ ಸಾಹಿತ್ಯ ಸಾಕಷ್ಟು ಪ್ರೌಢವಾಗಿ ಬೆಳೆದಿತ್ತೆಂಬುದು ಸ್ಪಷ್ಟವಾಗುತ್ತದೆ. ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಅಧ್ಯಯನದ ದೃಷ್ಟಿಯಿಂದ ಪಂಪಯುಗ, ವಚನಯುಗ, ಹರಿಹರಯುಗ, ಕುಮಾರವ್ಯಾಸ ಯುಗ, ಆಧುನಿಕಯುಗ ಎಂದು ಭಾವಿಸಲಾಗಿದೆ. ಸಾಹಿತ್ಯ ಪ್ರಕಾರಗಳ ದೃಷ್ಟಿಯಿಂದ ಚಂಪೂ, ವಚನ-ಸ್ವರವಚನಗಳ, ರಗಳೆ, ಷಟ್ಪದಿ, ಸಾಂಗತ್ಯ-ತ್ರಿಪದಿ, ಭಾವಗೀತೆ, ಗದ್ಯಸಾಹಿತ್ಯ ಎಂದೂ ಸಹ ವಿಭಾಗಿಸಿ ನಮ್ಮ ಸಾಹಿತ್ಯದ ಎತ್ತರ-ಬಿತ್ತರಗಳನ್ನೂ, ವ್ಯಾಪ್ತಿದೀಪ್ತಿ ಗಳನ್ನು ಅಧ್ಯಯನ ಮಾಡಲಾಗುತ್ತಿದೆ.

ನಮ್ಮಲ್ಲಿ ಅನೇಕ ಮಹಾಕವಿಗಳು ನೂರ್ಕಾಲ ನಿಲ್ಲುವಂಥ ಉತ್ತಮ ಕಾವ್ಯಗಳನ್ನು ರಚಿಸಿಕೊಟ್ಟಿದ್ದಾರೆ. ಅವು ಕನ್ನಡಕ್ಕೆ ಕೋಡು ಮೂಡಿಸಿ ಅದರ ಅಂತಃಸತ್ವವನ್ನು ಪ್ರಕಟಪಡಿಸಿವೆ. ಅಂಥ ಶ್ರೇಷ್ಠ ಕೃತಿಗಳಲ್ಲಿ ಕೆಲವನ್ನಾದರೂ ಇಲ್ಲಿ ಉಲ್ಲೇಖಿಸಬೇಕು. ಪಂಪನ **'ವಿಕ್ರಮಾರ್ಜುನ ವಿಜಯ'**, ರನ್ನನ **'ಸಾಹಸಭೀಜ ವಿಜಯ'** ಚಂಪೂ ಸಂಪ್ರದಾಯದ ಕೃತಿಗಳು. ಶಿವಶರಣರ ವಚನಗಳು ಸಾಹಿತ್ಯವೆನಿಸಿದವು. ಹರಿಹರನ ರಗಳೆ ಕಾವ್ಯಗಳು, ರಾಘವಾಂಕನ **'ಹರಿಶ್ಚಂದ್ರ ಕಾವ್ಯ'** ಯಾವುದೇ ಭಾಷೆ ಹೆಮ್ಮೆಪಡಬಹುದಾದ ಕೃತಿರತ್ನಗಳು. ರಾಜರನ್ನು ಹೊಗಳದೆ ದೇವನನ್ನು, ಅವನ ಭಕ್ತರನ್ನು ಕುರಿತು ಬರೆಯುವ, ಜನ ಬದುಕಲೆಂಬ ಸದಾಶಯದಿಂದ ಕೃತಿ ರಚಿಸುವ ಪರಿಪಾಠ ಆರಂಭವಾಯಿತು. ರುದ್ರಭಟ್ಟನ **'ಜಗನ್ನಾಥ ವಿಜಯ'**, ಜನ್ನನ 'ಯಶೋಧರ ಚರಿತೆ', ಕುಮಾರವ್ಯಾಸನ 'ಕರ್ನಾಟಕ ಭಾಷಾ ಕಥಾಮಂಜರಿ', ಲಕ್ಷ್ಮೀಶನ **'ಜೈಮಿನಿ ಭಾರತ'**, ಜನಮನವನ್ನಾಳಿದವು. ಸಾಹಿತ್ಯದೊಡನೆ ಸಂಗೀತವನ್ನು ಬೆರೆಸಿ ಕೀರ್ತನೆಗಳ ಮೂಲಕ ಜನರಬಳಿ ಸಾರಿತು ಹರಿದಾಸ ಸಾಹಿತ್ಯ **'ಸೋಮೇಶ್ವರ ಶತಕ'**, **'ರತ್ನಾಕರಾಧೀಶ್ವರ ಶತಕ'**, ಹರಿಹರನ ಶತಕಗಳು ಜನರ ನಾಲಗೆಯ ಮೇಲೆ ನಲಿದವು. ಷಡಕ್ಷರ ಕವಿಯ 'ರಾಜಶೇಖರ ವಿಲಾಸ' ಶಬರಶಂಕರ ವಿಳಾಸಗಳು ಚಂಪೂ ಸಂಪ್ರದಾಯಕ್ಕೆ





ಮರುಜೀವಣೆಯಿತ್ತವು. ಸರ್ವಜ್ಞನ ವಚನಗಳಂತೂ ನಾಡು ನುಡಿಗಳಾದವು. ನಿಜಗುಣ ಶಿವಯೋಗಿಯ ಷಟ್ ಶಾಸ್ತ್ರಗಳು ಕನ್ನಡಕ್ಕೆ ಶಾಸ್ತ್ರ ಸಾಹಿತ್ಯವನ್ನು ಒದಗಿಸಿದಂತೆ, ನಂತರದ ಹಾಡುಗಬ್ಬಕಾರರ ಹಾಡುಗಳು ಸುಳಿದ ಶಾಸನಗಳಾಗಿ ಜನರ ನಾಲಗೆಯ ಮೇಲೆ ನಲಿದವು.

ಆಧುನಿಕ ಕಾಲದಲ್ಲಂತೂ ಇಂಗ್ಲೀಷ್ ಮತ್ತಿತರ ಭಾಷಾ ಸಂಪರ್ಕದಿಂದಾಗಿ ಕನ್ನಡ ಭಾಷಾ ಸಾಹಿತ್ಯಗಳಿಗೆ ಹೊಸ ಹೊಸ ಆಯಾಮಗಳು ದೊರೆತವು. ಸಣ್ಣಕಥೆ, ಕಾದಂಬರಿ, ಪ್ರಬಂಧ, ಭಾವಗೀತೆ ಮೊದಲಾದ ಹೊಸ ಪ್ರಕಾರಗಳ ಸಾಹಿತ್ಯ ಸುಗ್ಗಿ ಕಾಣಿಸಿಕೊಂಡು ಗುಣ-ಗಾತ್ರಗಳೆರಡರಲ್ಲೂ ಕನ್ನಡ ಸಾಹಿತ್ಯ ಶ್ರೀಮಂತವಾಯಿತು.

ಪ್ರತಿಷ್ಠಿತ ಜ್ಞಾನಪೀಠ ಪ್ರಶಸ್ತಿಯನ್ನು ಆಧುನಿಕ ಸಾಹಿತ್ಯದ ಸಾಹಿತಿಗಳು – ಕುವೆಂಪು, ಬೇಂದ್ರೆ, ಮಾಸ್ತಿ, ಗೋಕಾಕ, ಕಾರಂತ, ಅನಂತಮೂರ್ತಿ ಹಾಗೂ ಗಿರೀಶ್‌ಕಾರ್ನಾಡ್ ಅವರು ಪಡೆದಿರು ವುದು ನಮ್ಮ ನುಡಿ ಬಲ್ಮೆಯನ್ನು, ಸಾಹಿತ್ಯದ ಹಿರಿಮೆಯನ್ನು ಸಾರುತ್ತಿದೆ ಯಲ್ಲವೆ?

ಕನ್ನಡನಾಡು-ನುಡಿಯ ಬಗ್ಗೆ ಇಷ್ಟು ತಿಳಿದ ಮೇಲೆ ನಮಗೆ ಅವುಗಳ ಬಗ್ಗೆ ಗೌರವ, ಅಭಿಮಾನಗಳು ಮೂಡುವುದು ಸಹಜ. ಇಂಥ ನಾಡನ್ನು ಮತ್ತಷ್ಟು ಸಂಪನ್ನಗೊಳಿಸಲು, ನುಡಿಯನ್ನು ಉಳಿಸಿ ಬೆಳೆಸಲು ನಾವು ಏನು ಮಾಡಬೇಕು ಎಂದು ಆಲೋಚಿಸಬೇಕು.

ನಮ್ಮ ಕವಿಗಳು, ಕಲಾವಿದರು, ಮುತ್ಸದ್ದಿಗಳು, ದಾರ್ಶನಿಕರು ನಮ್ಮ ನಾಡಿನ ಪ್ರತಿಷ್ಠೆಗೆ ಕಾರಣವಾಗಿದ್ದಾರೆ. ಅವರು ಬಿಟ್ಟುಹೋಗಿರುವ ಈ ಭವ್ಯ ಪರಂಪರೆಯನ್ನು ಮತ್ತಷ್ಟು ಉಜ್ವಲ ಗೊಳಿಸುವ ಹೊಣೆಗಾರಿಕೆ ನಮ್ಮದು. ನಾಡು ಸರ್ವತೋಮುಖವಾಗಿ ಬೆಳೆದು ಸ್ವಯಂಪೂರ್ಣತೆಯನ್ನು ಸಾಧಿಸಲು ನಾವೆಲ್ಲ ಶ್ರಮಿಸ ಬೇಕು. ಪ್ರಾಮಾಣಿಕ ದುಡಿಮೆ ಯೊಂದೇ ಇದಕ್ಕಿರುವ ಮಾರ್ಗ. ಇನ್ನು ನಮ್ಮ ನುಡಿ, ಎದೆ ಹಾಲಿನೊಡಗೂಡಿ ಬಂದ ನುಡಿ, ತನ್ನದೇ ಆದ ಹಿರಿಮೆಯನ್ನು ಹೊಂದಿದೆ ಪರಭಾಷಾ ವ್ಯಾಮೋಹದಿಂದ ಅದಕ್ಕೆ ಧಕ್ಕೆ ಬಾರದಂತೆ ಎಚ್ಚರವಹಿಸಬೇಕಿದೆ. ರಾಜ್ಯೋತ್ಸವದ ಶುಭ ಸಂದರ್ಭದಲ್ಲಿ ನಾವೆಲ್ಲೂ ನಾಡು-ನುಡಿಯ ಬಗೆಗಿನ ಪ್ರೀತಿ-ಅಭಿಮಾನಗಳನ್ನು ಪ್ರತಿಷ್ಠಾಪಿಸಿಕೊಳ್ಳಬೇಕು.

## ಸಜ್ಜನಿಕೆಯ ಸಾಕಾರಮೂರ್ತಿ
# ಶ್ರೀ ಟಿ.ಆರ್. ಮಹಾದೇವಯ್ಯ

– ಎಚ್.ಎಸ್. ಸಿದ್ಧಗಂಗಪ್ಪ *

ಶ್ರೀ ಟಿ.ಆರ್. ಮಹಾದೇವಯ್ಯ ಅವರದು ನಾಡಿನ ಸಾಹಿತ್ಯ, ಶೈಕ್ಷಣಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸುಪ್ರಸಿದ್ಧ ಚಿರಪರಿಚಿತ ಹೆಸರು. ಕಳೆದ ಐವತ್ತು ವರ್ಷಗಳಿಂದ ಸದ್ದುಗದ್ದಲವಿಲ್ಲದೆ ಸೇವೆ ಸಲ್ಲಿಸುತ್ತಾ ಬಂದಿದ್ದ ನಿಷ್ಠಾವಂತ ಕರ್ಮಯೋಗಿ. ಶರಣರ ಉದಾತ್ತ ಧ್ಯೇಯಗಳನ್ನು ಮಾನವೀಯ ಮೌಲ್ಯಗಳನ್ನು ಜೀವನದಲ್ಲಿ ಕೊನೆ ಉಸಿರಿರುವವರಿಗೂ ಅಳವಡಿಸಿಕೊಂಡು ಬಂದಿದ್ದ ಶ್ರೀ ಮಹಾದೇವಯ್ಯನವರಲ್ಲಿದ್ದ ಸೌಜನ್ಯ, ಸರಳತೆ, ವಿನಯವಂತಿಕೆ, ಮಲ್ಲಿಗೆಯ ಪರಿಮಳದಷ್ಟೇ ಸಹಜವಾಗಿತ್ತು. ನಡೆನುಡಿಯಲ್ಲಿ ಏಕತಾನತೆಯನ್ನು ಕಾಪಾಡಿಕೊಂಡಿದ್ದ ಅವರಿಗೆ 'ಮಾತು ಬೆಳ್ಳಿಯಾದರೆ ಮೌನ ಚಿನ್ನ' ಎಂಬ ನಾಣ್ನುಡಿ ತುಂಬ ಪ್ರಿಯವಾಗಿತ್ತು. ಆದರೆ ವೇದಿಕೆಯ ಮೇಲೆ ನಿಂತರೆ ಮೌನ ಕರಗಿ, ಮಾತು ಸ್ಫಟಿಕದಷ್ಟೇ ಸ್ಪಷ್ಟವಾಗಿ, ಆಕರ್ಷಕವಾಗಿರುತ್ತಿತ್ತು. ಪ್ರೇಕ್ಷಕರಿಗೆ ಸಂಪಿಗೆಯ ಬನದಲ್ಲಿ ಬೀಸುವ ತಂಗಾಳಿಯ ರಸಾನುಭವ !

ಶ್ರೀ ಮಹಾದೇವಯ್ಯನವರು ಯಾವುದೇ ಕೆಲಸವನ್ನು ವಹಿಸಿಕೊಳ್ಳಲಿ, ಅದು ಚಿಕ್ಕದಿರಲಿ, ದೊಡ್ಡದಿರಲಿ ಯಾವುದೇ ಲೋಪವಾಗದಂತೆ ಶ್ರದ್ಧೆಯಿಂದ, ಬದ್ಧತೆಯಿಂದ, ನಿಷ್ಠೆಯಿಂದ ಮಾಡುವ ಗುಣವನ್ನು ಮೈಗೂಡಿಸಿಕೊಂಡಿದ್ದರು. ಅವರಿದ್ದಲ್ಲಿ ಅಚ್ಚುಕಟ್ಟಿಗೆ ಅಗ್ರಸ್ಥಾನ. ನೋಡಿದವರು 'ಹೌದು ಹೌದು' ಎನ್ನುವಂತಹ ಕಾರ್ಯನಿರ್ವಹಿಸುವ ಕಾಯಕ ನಿಷ್ಠೆ, ಆಲಸ್ಯ, ಸೋಮಾರಿತನ ಅವರಿಗೆ ಶತ್ರುವಾಗಿದ್ದವು. ಶ್ರದ್ಧೆ ಮತ್ತು ಸಮಯ ಪ್ರಜ್ಞೆ, ಕ್ರಿಯಾಶೀಲತೆ ಅವರೊಂದಿಗೆ ಬೆಳೆದು ಬಂದ ಆದರ್ಶ ಗುಣಗಳಾಗಿದ್ದವು.

ಸಮಾಜದಲ್ಲಿ ಎರಡು ರೀತಿಯ ಜನರಿದ್ದಾರೆ. ಕೆಲವರು ತಾವು ಮಾಡಿದ ಅಲ್ಪ ಸಾಧನೆಯನ್ನು ಭೂತಕನ್ನಡಿಯಲ್ಲಿ ಹಿಡಿದು ತೋರಿಸಿ ತಾವೇ ಬೆನ್ನು ತಟ್ಟಿಕೊಂಡು ಅರ್ಹತೆಯಿಲ್ಲದಿದ್ದರೂ ಅನೇಕ ಪ್ರಶಸ್ತಿಗಳನ್ನು ತಮ್ಮದಾಗಿಸಿಕೊಂಡರೆ ಮತ್ತೆ ಕೆಲವರು ತಾವು ಮಾಡಿದ ದೊಡ್ಡ ಸಾಧನೆಯನ್ನು ಅಲ್ಪವೆಂದು ಪರಿಭಾವಿಸಿ, ಯಾವುದೇ ಪ್ರಶಸ್ತಿಯನ್ನು ಅರಸುತ್ತಾ ಹೋಗದೆ ತಾವು ಮಾಡುವ ಕಾಯಕದಲ್ಲಿ ನೆಮ್ಮದಿ, ಸಂತೋಷವನ್ನು ಕಂಡುಕೊಳ್ಳಲು ಬಯಸುತ್ತಾರೆ. ಶ್ರೀ ಟಿ.ಆರ್. ಮಹಾದೇವಯ್ಯನವರು ಸೂರ್ಯನಂತೆ ಯಾವುದೇ ಪ್ರತಿಫಲಾಪೇಕ್ಷೆ ಇಟ್ಟುಕೊಳ್ಳದೆ ಪ್ರತಿದಿನ ಒಳ್ಳೆಯ ಕಾಯಕಗಳನ್ನು ಮಾಡುತ್ತಾ ಬಂದ ಎರಡನೆ ಗುಂಪಿಗೆ ಸೇರಿದ ಅಪರೂಪದ ಸಜ್ಜನಿಕೆಯ ಸಾಕಾರಮೂರ್ತಿಯಾಗಿದ್ದರು. ಎಂಭತ್ತು ಮೂರು ವಸಂತಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿಯುತ್ತಾ ಸಾಧನ ಪಥದಲ್ಲಿ ಬದುಕಿನ ಹೆಜ್ಜೆಗಳನ್ನು ಮೂಡಿಸುತ್ತಾ, ಎಲ್ಲರ ಪ್ರೀತಿ ವಿಶ್ವಾಸಗಳಿಗೆ, ಗೌರವಕ್ಕೆ ಪಾತ್ರರಾಗಿದ್ದರು.

### ಜನನ :

ಹುಟ್ಟಿದ ಊರು ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕು ತಿಪ್ಪೂರು. ಹುಟ್ಟಿದ ದಿನಾಂಕ ೬-೧೨-೧೯೩೪. ತಂದೆ ಶರಣ ರುದ್ರಯ್ಯ, ತಾಯಿ ಶರಣೆ ಶ್ರೀಮತಿ ರುದ್ರಮ್ಮ. ಸಂಪ್ರದಾಯಸ್ಥ ಬಡ ಸುಸಂಸ್ಕೃತ ಕುಟುಂಬ. ಹಾಸಿಹೊದಿಯುವಷ್ಟು ಬಡತನವಿದ್ದರೂ ಸಂಪ್ರದಾಯ ಆಚಾರ ವಿಚಾರಗಳಿಗೆ ಕೊರತೆಯಿರಲಿಲ್ಲ. ಹುಟ್ಟಿದಾಗ ತೊಟ್ಟಿಲಲ್ಲಿ ಮಲಗಿಸಿ ಜೋಗುಳ ಹಾಡಿ ಅಕ್ಕರೆಯಿಂದ ಇಟ್ಟ ಹೆಸರು. ಮಹಾದೇವಯ್ಯ. ಲೋಕದೊಡೆಯ ಸದಾಶಿವನ ಒಲುಮೆ, ಕೃಪೆ ಮತ್ತು ಕರುಳಿನ ಕುಡಿಯ ಮೇಲಿರಲಿ ಎಂಬುದು ಹೆತ್ತವರ ಹೆಬ್ಬಯಕೆಯಾಗಿತ್ತು. ಹೆಸರಿಗೆ ತಕ್ಕಂತೆ ಜೀವನದಲ್ಲಿ ಎದುರಾಗುವ ಬರಸಿಡಿಲು, ಗುಡುಗು ಮಿಂಚುಗಳನ್ನು, ದುಃಖ ದುಮ್ಮಾನ, ಕಹಿಯ ಅನುಭವಗಳನ್ನು ಅರಗಿಸಿಕೊಂಡು ತಮ್ಮನ್ನು ನಂಬಿದವರಿಗೆ ಸಂತೋಷವನ್ನು ಕೊಡುತ್ತಾ ಬಂದುದು ಕಾಕತಾಳೀಯವಾದರೂ ಅದು ವಾಸ್ತವವೂ ಕೂಡ.

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ಬಿನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧





### ಶಿಕ್ಷಣ :

ಶ್ರೀ ಮಹಾದೇವಯ್ಯನವರು ಬಡಕುಟುಂಬದಲ್ಲಿ ಹುಟ್ಟಿದರೂ ಬಡತನ ಓದಿಗೆ ಎಂದೂ ಅಡ್ಡಿಯಾಗಲಿಲ್ಲ. ಜ್ಞಾನದಾಹದ ಮುಂದೆ ಹೊಟ್ಟೆಹಸಿವು ನಾಚಿ, ಸೋತು ಶರಣಾಯಿತು. ಸಹಪಾಠಿಗಳ ಒತ್ತಾಯಕ್ಕೆ ಕಟ್ಟುಬಿದ್ದು ಆಟದ ಮೈದಾನಕ್ಕೆ ಹೋಗಿ ಚಿನ್ನಿದಾಂಡು, ಬೀರುಚಂಡಾಟ ಆಡುವಾಗಲೂ ಶಾಲೆಯಲ್ಲಿ ಗುರುಗಳು ಹೇಳಿಕೊಟ್ಟ ಪಾಠಗಳ ಬಗ್ಗೆ ಚಿಂತನೆ. ಮರುಚಿಂತನೆ ಮಾಡುತ್ತಾ ಮೈಮರೆತಾಗ ಬೀರುಚಂಡಿನ ರುಚಿ ಸವಿದಿದ್ದುಉಂಟು. ಬಾಲ್ಯದಲ್ಲಿದ್ದಾಗ ಅವರಿಗೆ ಗುಂಪಿನಲ್ಲಿರುವುದಕ್ಕಿಂತ ಏಕಾಂತ ವಾಸವೇ ಹೆಚ್ಚು ಪ್ರಿಯವಾಗಿತ್ತು. ಆ ಏಕಾಂತತನ ಸಮಾಜದಿಂದ ಬೇರ್ಪಟ್ಟಿದ್ದಲ್ಲ. ಕಮಲದ ಮೇಲಿನ ನೀರಿನ ಬಿಂದುವಂತೆ ಇರುತ್ತಿದ್ದರು.

ಪ್ರೌಢಶಿಕ್ಷಣವನ್ನು ಉನ್ನತ ದರ್ಜೆಯಲ್ಲಿ ಮುಗಿಸಿದಾಗ ಮನೆಯವರು, ನೆಂಟರಿಷ್ಟರು ಯಾವುದಾದರೂ ಉದ್ಯೋಗಕ್ಕೆ ಸೇರಿ ಮನೆಯ ಜವಾಬ್ದಾರಿಯನ್ನು ವಹಿಸಿಕೊಳ್ಳುವಂತೆ ಸಲಹೆ ಮಾಡಿದರು. ಜ್ಞಾನ ದಾಹದಲ್ಲಿದ್ದ ಅವರಿಗೆ ಆ ಸಲಹೆ ಪ್ರಿಯವಾಗಲಿಲ್ಲ. ಮುಂದೆ ಬರಬೇಕೆಂಬ ಉತ್ಕಟವಾದ ಬಯಕೆ, ದೃಢ ವಿಶ್ವಾಸ, ಕಾಲೇಜಿಗೆ ಸೇರುವಂತೆ ಮಾಡಿತು. ತುಮಕೂರಿನ ಸರ್ಕಾರಿ ಕಾಲೇಜಿಗೆ ಸೇರಿದರು. ವಸತಿ ಮತ್ತು ಊಟದ ಸಮಸ್ಯೆ ಎದುರಾದಾಗ ಶ್ರೀ ಜಿ.ಎಂ. ಸಿದ್ಧರಾಮಣ್ಣ ಉಚಿತ ವಿದ್ಯಾರ್ಥಿ ನಿಲಯ ಅವರಿಗೆ ಆಶ್ರಯ ನೀಡಿ, ವ್ಯಾಸಂಗ ಮುಂದುವರಿಸಲು ಅವಕಾಶವನ್ನು ಕಲ್ಪಿಸಿಕೊಟ್ಟಿತು. ಕಷ್ಟಕಾಲದಲ್ಲಿ ನೆರವು ನೀಡಿದ ಶ್ರೀ ಸಿದ್ಧರಾಮಣ್ಣನವರನ್ನು ಸದಾ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಿದ್ದರು. ಉಪಕಾರವನ್ನು ನೆನೆಯುವ ಸುಸಂಸ್ಕೃತ ಗುಣ. ಕರ್ಮಯೋಗಿ, ಲೋಕ ಸೇವಾನಿರತ ಶ್ರೀ ಜಿ.ಎಂ. ಸಿದ್ಧರಾಮಣ್ಣನವರ ಬಗ್ಗೆ ಕೃತಿ ರಚಿಸುವುದರ ಮೂಲಕ ಕೃತಜ್ಞತೆಯನ್ನು ಸಲ್ಲಿಸಿದ ಹೃದಯ ಶ್ರೀಮಂತಿಕೆ.

ಶ್ರೀ ಮಹಾದೇವಯ್ಯನವರು ತಮಗೆ ದೊರಕಿದ ಅವಕಾಶವನ್ನು ಅರ್ಥಪೂರ್ಣವಾಗಿ ಸದುಪಯೋಗ ಪಡಿಸಿಕೊಳ್ಳಲು ತಮ್ಮನ್ನು ತೊಡಗಿಸಿಕೊಂಡರು. ಕಾಲವನ್ನು ಚೆನ್ನಾಗಿ ದುಡಿಸಿಕೊಂಡರು. ತ್ರಿವಿಧ ದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಶಿವನುಡಿಗಳಲ್ಲಿ ಕಾಲವನ್ನು ಕುರಿತು ಹೇಳಿರುವ **"ಕಾಲವೆನ್ನುವುದು ಎಲ್ಲಕ್ಕಿಂತಲೂ ಬಹಳ ಬೆಲೆ ಬಾಳುವಂತಹ ಅಮೂಲ್ಯವಸ್ತು. ಅದು ಒಮ್ಮೆ ಕಳೆದು ಹೋದರೆ ಅದನ್ನು ಮತ್ತೆ ಗಳಿಸಲು ಸಾಧ್ಯವಾಗುವುದಿಲ್ಲ. ಕಾಲದ ಮಹತ್ವವನ್ನರಿತು ಕೊಂಡು ಚೆನ್ನಾಗಿ ಉಪಯೋಗ ಮಾಡಿಕೊಳ್ಳುವ ಪ್ರಜ್ಞೆ ಮೂಡಿದಾಗ ವ್ಯಕ್ತಿ ಪ್ರಗತಿ ಹೊಂದಲು ಸಾಧ್ಯವಾಗುತ್ತದೆ"** ಎಂಬ ನುಡಿಗಳು ಶ್ರೀ ಮಹಾದೇವಯ್ಯ ನವರ ಮೇಲೆ ಗಾಢವಾದ ಪ್ರಭಾವ ಬೀರಿದ್ದವು. ಹಾಗಾಗಿ ಕಾಲವನ್ನು ದುಡಿಸಿಕೊಳ್ಳುವಲ್ಲಿ ಕಾಲದೊಂದಿಗೆ ರಾಜಿ ಮಾಡಿಕೊಂಡವರಲ್ಲ. ಒಂದೊಂದು ನಿಮಿಷವನ್ನು ಸದ್ಬಳಕೆ ಮಾಡಿಕೊಂಡಿದ್ದರಿಂದ ಪ್ರಗತಿಯ ಮೆಟ್ಟಿಲುಗಳನ್ನೇರುತ್ತಾ ಮುಂದೆ ಸಾಗಿದರು. ಎಲ್ಲಿಯೂ ಹಿಂದಿರುಗಿ ನೋಡಲಿಲ್ಲ. ಪ್ರಾಮಾಣಿಕ ಪ್ರಯತ್ನಕ್ಕೆ ನಿರೀಕ್ಷಿತ ಫಲ ! ಪದವೀಧರನಾದಾಗ ಅವರಲ್ಲಿ ಸಾರ್ಥಕತೆಯ ಭಾವನೆ ಮೂಡಿತು. "ಕೈಕೆಸರಾದರೆ ಬಾಯಿ ಮೊಸರು" ಎಂಬ ಗಾದೆ ಅವರಿಗೆ ಸದಾ ಸ್ಫೂರ್ತಿಯ ಸೆಲೆಯಾಗಿತ್ತು. ಸದಾ ಎತ್ತರಕ್ಕೆ ಏರಬೇಕೆಂಬ ತವಕ. ಗ್ರಂಥಗಳನ್ನು ಅಧ್ಯಯನ ಮಾಡಿದಷ್ಟು ಜ್ಞಾನದ ಹಸಿವನ್ನು ತಣಿಸಲು ಸಾಧ್ಯ ಎಂಬುದನ್ನು ಅನುಭವದಿಂದ ಕಂಡು ಕೊಂಡು ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು.

ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಕನ್ನಡ ಎಂ.ಎ. ತರಗತಿಗೆ ಅರ್ಜಿ ಹಾಕಿದರು. ನಿರೀಕ್ಷೆಯಂತೆ ಪ್ರವೇಶ ಸುಲಭವಾಗಿ ದೊರೆಯಿತು. ಎರಡು ವರ್ಷಗಳ ಅಧ್ಯಯನವನ್ನು ತಪಸ್ಸನ್ನಾಗಿ ಸ್ವೀಕರಿಸಿದರು. ಸಹಪಾಠಿಗಳಿಂದ 'ಪುಸ್ತಕದ ಹುಳು' ಎಂಬ ಬಿರುದನ್ನು ಪಡೆದರು. ಅವರ ಈ ಬಿರುದನ್ನು ನಗುನಗುತ್ತಾ ಸಂತೋಷವಾಗಿ ಸ್ವೀಕರಿಸಿದರು. ನಗುವಿನಿಂದ ಮುಖ ಬೆಲೆಯನ್ನು, ಪ್ರೀತಿಯಿಂದ ಹೃದಯ ವೈಶಾಲ್ಯತೆಯನ್ನು, ಸನ್ನಡತೆಯಿಂದ ಗೌರವವನ್ನು ಹೆಚ್ಚಿಸಿಕೊಂಡು ಮಾದರಿಯಾಗಿ ಬದುಕಿ ತೋರಿಸಿದರು. ವಿದ್ವಾಂಸ ಪ್ರಾಧ್ಯಾಪಕರ ಒಡನಾಟ, ಸಾಹಿತ್ಯ ಕೃತಿಗಳ ನಿರಂತರ ಅಧ್ಯಯನ ಅವರಲ್ಲಿ ಶಿಸ್ತುಬದ್ಧ ಜೀವನ, ಮಾನವೀಯ ಮೌಲ್ಯಗಳನ್ನು ಮೈಗೂಡುವಂತೆ ಮಾಡಿತು. ಉತ್ತಮ ಶ್ರೇಣಿಯ ಫಲಿತಾಂಶ ಅವರಲ್ಲಿ ಆತ್ಮಸ್ಫೂರ್ತಿಯನ್ನು ಮೂಡಿಸಿತು. ಅವರ ಬಯಕೆ ಕೈಗೂಡಿತು. ಕನ್ನಡ ಸ್ನಾತಕೋತ್ತರ ಪದವಿಯ ಜೊತೆಗೆ ಇಂಗ್ಲೀಷ್ ಸ್ನಾತಕೋತ್ತರ ಪದವಿಯನ್ನು ತಮ್ಮದಾಗಿಸಿಕೊಂಡರು.

### ವೃತ್ತಿ ಜೀವನ :

ಸ್ನಾತಕೋತ್ತರ ಪದವಿಯನ್ನು ಪಡೆದ ಶ್ರೀ ಟಿ.ಆರ್. ಮಹಾದೇವಯ್ಯನವರು ಬೆಂಗಳೂರನ್ನು ತಮ್ಮ ಕಾರ್ಯ ಕ್ಷೇತ್ರವನ್ನಾಗಿ ಆಯ್ಕೆ ಮಾಡಿಕೊಂಡರು.

ಶ್ರೀ ಜಗದ್ಗುರು ರೇಣುಕಾಚಾರ್ಯ ಸಂಜೆ ಕಾಲೇಜಿನಲ್ಲಿ ಉಪನ್ಯಾಸಕರಾಗಿ ವೃತ್ತಿಜೀವನವನ್ನು ಆರಂಭಿಸಿದರು. ಆಕರ್ಷಕ ವ್ಯಕ್ತಿತ್ವ, ಬೋಧನಾ ಕಲೆಯಿಂದ ಅಯಸ್ಕಾಂತದಂತೆ ವಿದ್ಯಾರ್ಥಿಗಳನ್ನು ತಮ್ಮತ್ತ ಆಕರ್ಷಿಸಿದರು. ಬಹುಬೇಗ ವಿದ್ಯಾರ್ಥಿಗಳ 'ಪ್ರೀತಿಯ ಮೇಷ್ಟ್ರ'ದರು. ಮನಸ್ಸಿಗೆ ನೋವಾಗುವಂತಹ ಕೆಲವು ಅಹಿತಕರ ಘಟನೆಗಳಿಂದ ನೊಂದು ಭಾರವಾದ ಹೃದಯದಿಂದ ರೇಣುಕಾಚಾರ್ಯ ಸಂಜೆ ಕಾಲೇಜಿಗೆ ವಿದಾಯ ಹೇಳಿ, ಕೆ.ಎಲ್.ಇ. ಸಂಸ್ಥೆ ಆಶ್ರಯದಲ್ಲಿ ನಡೆಯುತ್ತಿದ್ದ ಶ್ರೀ ನಿಜಲಿಂಗಪ್ಪ ಸಂಜೆ ಕಾಲೇಜಿನಲ್ಲಿ ವೃತ್ತಿಯನ್ನು ಮುಂದುವರಿಸಿದರು. ಹೂವಿನ ಪರಿಮಳ ಗಾಳಿ ಬೀಸುವ ದಿಕ್ಕಿನಲ್ಲಿಷ್ಟೇ ಹರಡುತ್ತದೆ. ಆದರೆ ವ್ಯಕ್ತಿಯ ಒಳ್ಳೆತನ ಎಲ್ಲಡೆ ವ್ಯಾಪಿಸುತ್ತದೆ ಎಂಬುದನ್ನು ತಮ್ಮ ನಡೆ ನುಡಿಗಳಿಂದ ತೋರಿಸಿದರು. ಆ ವೇಳೆಗಾಗಲೆ ಅವರು ಜನಪ್ರಿಯ ಅಧ್ಯಾಪಕರೆಂಬ ಹೆಗ್ಗಳಿಕೆಗೆ ಭಾಜನರಾಗಿದ್ದರು. ನಂತರ ಎಸ್.ಎಲ್.ಎನ್. ವಿದ್ಯಾ ಸಂಸ್ಥೆಯ ಆಡಳಿತ ಮಂಡಳಿಯವರ ಪ್ರೀತಿ ಪೂರ್ವಕ ಒತ್ತಾಯದಿಂದ ಶ್ರೀ ನಿಜಲಿಂಗಪ್ಪ ಕಾಲೇಜನ್ನು ಬಿಟ್ಟು ಎಸ್.ಎಲ್.ಎನ್. ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದರು. ಸಾವಿರಾರು ವಿದ್ಯಾರ್ಥಿಗಳಿಗೆ ಪಾಠ ಹೇಳುವ ಪುಣ್ಯ ಅವರದಾಯಿತು. ವಿದ್ಯಾರ್ಥಿಗಳಿಗೆ ಪಾಠ ಮಾಡುವುದರ ಜೊತೆಗೆ ಅವರಲ್ಲಿ ಸುಪ್ತವಾಗಿದ್ದ ಪ್ರತಿಭೆ ಅನಾವರಣಗೊಳ್ಳಲು ಸಾಂಸ್ಕೃತಿಕ ವೇದಿಕೆಯನ್ನು ಒದಗಿಸಿಕೊಟ್ಟರು. ವಿದ್ಯಾರ್ಥಿಗಳಿಗೆ ಚೈತನ್ಯ, ಉತ್ಸಾಹವನ್ನು ತುಂಬಿ ಅವರು ಭವಿಷ್ಯ ಉಜ್ವಲವಾಗುವಂತೆ ಮಾಡಿದ ಶಿಲ್ಪಿ ಎಂಬ ಗೌರವಕ್ಕೆ ಪಾತ್ರರಾದರು. ವಿದ್ಯಾರ್ಥಿಗಳಿಗೆ ಆತ್ಮವಿಶ್ವಾಸವನ್ನು ತುಂಬುತ್ತ ಎದುರಾಗುವ ನೋವುಗಳಿಂದ ಸಹನೆಯನ್ನು, ನಮ್ಮ ಸಾಧನೆಗಳಿಂದ ಬದ್ಧತೆಯನ್ನು ಅರಿಯುತ್ತ ಸಾಗುವುದೇ ನಿಜವಾದ ಬದುಕು ಎಂಬುದನ್ನು ವಿದ್ಯಾರ್ಥಿಗಳಿಗೆ ತಿಳಿಸುವುದರ ಮೂಲಕ ಅವರು ಭವಿಷ್ಯದಲ್ಲಿ ಬೆಳಕು ಕಂಡುಕೊಳ್ಳುವಂತೆ ಮಾರ್ಗದರ್ಶನ ಮಾಡಿದರು. ಅಲ್ಲದೆ ಯಶಸ್ಸೆಂಬ ನೆರಳನ್ನು ಹಿಡಿಯಲು ಹೆಣಗುವ ಬದಲು ಬೆಳಕಿನೆಡೆಗೆ ಹೆಜ್ಜೆ ಹಾಕಿದರೆ ಆ ನೆರಳೇ ನಮ್ಮನ್ನು ಹಿಂಬಾಲಿಸುತ್ತದೆ ಎಂಬ ಜೀವನದ ವಾಸ್ತವತೆಯನ್ನು ಅರ್ಥಮಾಡಿಕೊಳ್ಳುವಂತೆ ತಿಳಿಸಿದರು.

### ಕನ್ನಡ ಸಾಹಿತ್ಯ ಪರಿಷತ್ತು :

ವಿದ್ಯಾರ್ಥಿಗಳಿಗೆ ಪಾಠ ಮಾಡುವುದರ ಜೊತೆಗೆ ತಮ್ಮ ನಿರಂತರ ಅಧ್ಯಯನದಿಂದ ಜ್ಞಾನದ ಹಸಿವನ್ನು ವಿಸ್ತರಿಸಿಕೊಳ್ಳುತ್ತ ಜ್ಞಾನದ ಗಣಿಯಾದರು. ಅವರಲ್ಲಿನ ಪಾಂಡಿತ್ಯ, ಪ್ರತಿಭೆಯನ್ನು ಮನಗೊಂಡ ಸಾಹಿತ್ಯ ದಿಗ್ಗಜರುಗಳಾದ ತೀ.ನಂ. ಶ್ರೀ ಡಿ.ಎಲ್. ನರಸಿಂಹಾಚಾರ್ಯ, ಮುಂತಾದವರು ಕನ್ನಡ ಸಾಹಿತ್ಯ ಪರಿಷತ್ತಿನ ಬೃಹತ್ ಯೋಜನೆಯಾದ ಕನ್ನಡ-ಕನ್ನಡ ಬೃಹತ್ ನಿಘಂಟು ರಚನಾ ಕಾರ್ಯದಲ್ಲಿ ತೊಡಗಿಸಿಕೊಳ್ಳಲು ಕರೆ ನೀಡಿದರು. ಮೊದಲಿನಿಂದಲೂ ಇಂತಹ ವಿದ್ವತ್ ವಲಯದ ರಚನಾತ್ಮಕ ಕಾರ್ಯದಲ್ಲಿ ಆಸಕ್ತಿಯನ್ನು ಹೊಂದಿದ್ದ ಶ್ರೀ ಮಹಾದೇವಯ್ಯನವರಿಗೆ ಈ ಅನಿರೀಕ್ಷಿತ ಆಹ್ವಾನ ಅತ್ಯಂತ ಸಂತೋಷವನ್ನುಂಟು ಮಾಡಿತು. ತಮಗೆ ದೊರೆತ ಈ ಅಮೂಲ್ಯ ಅವಕಾಶವನ್ನು ಅರ್ಥಪೂರ್ಣವಾಗಿ ಸದುಪಯೋಗಪಡಿಸಿಕೊಂಡರು. ಮೂರು ದಶಕಗಳಿಗೂ ಹೆಚ್ಚುಕಾಲ ಉಪ ಸಂಪಾದಕರಾಗಿ ಸೇವೆ ಸಲ್ಲಿಸಿ ನಿಘಂಟು ಕ್ಷೇತ್ರದಲ್ಲಿ ತಮ್ಮ ಹೆಸರು ಚಿರಾಯುವಾಗಿ ಉಳಿಯುವಂತೆ ಮಾಡಿದರು.

### ಮಠಗಳೊಂದಿಗೆ ಅವಿನಾಭಾವ ಸಂಬಂಧ :

ಮಠಗಳ ಬಗ್ಗೆ, ಮಠಾಧಿಪತಿಗಳ ಬಗ್ಗೆ ಅನನ್ಯವಾದ ಭಕ್ತಿ ಗೌರವವನ್ನಿಟ್ಟುಕೊಂಡು ಬಂದಿದ್ದರು. ಅವರ ಸೇವೆ ಬಹುತೇಕ ಮಠಗಳಿಗೆ ಸಂದಿದೆ, ವಿಶೇಷವಾಗಿ ಶ್ರೀ ಸಿದ್ಧಗಂಗಾ ಮಠ, ಕನಕಪುರ ದೇಗುಲಮಠವೂ ಸೇರಿದಂತೆ ಅನೇಕ ಮಠಗಳಲ್ಲಿ ಸಾಹಿತ್ಯ ಸೇವೆ ಮಾಡುವುದರ ಮೂಲಕ ಧನ್ಯತೆಯನ್ನು ಪಡೆದಿದ್ದರು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪಟ್ಟಾಧಿಕಾರದ ಸುವರ್ಣ ಮಹೋತ್ಸವ ಸಂದರ್ಭದಲ್ಲಿ (೧೯೮೧) ಪಂಡಿತ ಚನ್ನಪ್ಪ ಎರೆಸೀಮೆ ಅವರೊಂದಿಗೆ ಸೇರಿ ಹೊರತಂದ ಸಿದ್ಧಗಂಗಾಶ್ರೀ ಬೃಹತ್ ಸಂಪುಟವನ್ನು ಹಾಗೂ ಪೂಜ್ಯ ಶ್ರೀಗಳವರ ಪಟ್ಟಾಧಿಕಾರದ ವಜ್ರ ಮಹೋತ್ಸವ ಸಂದರ್ಭದಲ್ಲಿ ಪಂಡಿತ ಚನ್ನಪ್ಪ ಎರೆಸೀಮೆ ಅವರ ಪ್ರಧಾನ ಸಂಪಾದಕತ್ವದಲ್ಲಿ ಶ್ರೀ ಹೆಚ್.ವಿ. ವೀರಭದ್ರಯ್ಯ ಹಾಗೂ ಶ್ರೀ ಬಿ. ವೀರಭದ್ರಯ್ಯ ಅವರ ಜೊತೆಗೂಡಿ ಸಂಪಾದಿಸಿದ 'ದಾಸೋಹಸಿರಿ' ಬೃಹತ್ ಗ್ರಂಥ ೧೯೯೭ರಲ್ಲಿ ಲೋಕಾರ್ಪಣೆಯಾಯಿತು. ಈ ಗ್ರಂಥವನ್ನು ಹೊರತರುವಲ್ಲಿ ಶ್ರೀ ಮಹಾದೇವಯ್ಯನವರ ಪ್ರಾಮಾಣಿಕ ದುಡಿಮೆ ಅಪಾರವಾದುದು.

ಕೆಲವು ವರ್ಷಗಳ ಕಾಲ ಸಿದ್ಧಗಂಗಾ ಪತ್ರಿಕೆಯ ಸಲಹಾ ಸಮಿತಿಯ ಸದಸ್ಯರಾಗಿದ್ದು ಪತ್ರಿಕೆಯ ಬೆಳವಣಿಗೆಗೆ ತಮ್ಮ ಅಮೂಲ್ಯವಾದ ಸಲಹೆ-ಸಹಕಾರಗಳನ್ನು ನೀಡಿದುದಲ್ಲದೆ ಪತ್ರಿಕೆಗೆ ಮೌಲಿಕ ಲೇಖನಗಳನ್ನು ನೀಡಿದ್ದರು.

**ಬಸವ ಸಮಿತಿ :** ಬಸವಾದಿ ಶರಣರ ಜೀವನ ಮೌಲ್ಯಗಳನ್ನು, ಆದರ್ಶಗಳನ್ನು ಮನೆ ಮನೆಗೂ ಮುಟ್ಟಿಸಿ, ಸಾಮಾಜಿಕ ಬದುಕನ್ನು ಹಸನು ಮಾಡಬೇಕೆನ್ನುವ





ಸದುದ್ದೇಶದಿಂದ ಬಸವಾಭಿಮಾನಿಗಳಾದ ಡಾ. ಬಿ.ಡಿ. ಜತ್ತಿಯವರು ೧೯೬೪ ರಲ್ಲಿ ಬಸವ ಸಮಿತಿಯನ್ನು ಸ್ಥಾಪಿಸಿದರು. ಸಮಿತಿ ಅನೇಕ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸುತ್ತಾ ಬರುತ್ತಿದೆ. ಬಸವಾದಿ ಶರಣರ ಜೀವನ ಚರಿತ್ರೆಗಳನ್ನು ಜನಸಾಮಾನ್ಯರಿಗೆ ಮುಟ್ಟಿಸಬೇಕೆಂಬ ಆಶಯದಿಂದ ಬಸವ ಸಮಿತಿಯಲ್ಲಿ ಪ್ರಕಟಣೆಗಳು ಹಾಗೂ ಸಂಶೋಧನಾ ವಿಭಾಗವನ್ನು ಸ್ಥಾಪಿಸಿ ಆ ಮೂಲಕ ಅನೇಕ ಮಹತ್ವದ ಕೃತಿಗಳನ್ನು ಪ್ರಕಟಣೆ ಮಾಡಿ, ಶರಣಾಭಿಮಾನಿಗಳ ಪ್ರೀತಿ, ಗೌರವಕ್ಕೆ ಪಾತ್ರವಾಗಿದೆ. ಅನೇಕ ವರ್ಷಗಳ ಕಾಲ ಈ ವಿಭಾಗದಲ್ಲಿ ನಿರ್ದೇಶಕರಾಗಿ ನಿಷ್ಠೆಯಿಂದ ಸೇವೆ ಸಲ್ಲಿಸಿದ ಶ್ರೀ ಟಿ.ಆರ್. ಮಹಾದೇವಯ್ಯನವರು ಬಸವಣ್ಣನವರ ಸಮಕಾಲೀನರು, ಬಸವಣ್ಣನವರ ವಚನ ಸಂಗ್ರಹವೂ ಸೇರಿದಂತೆ ಸಮಿತಿಯಿಂದ ಪ್ರಕಟವಾಗಿರುವ ಮುಕ್ಕಾಲು ಭಾಗ ಗ್ರಂಥಗಳನ್ನು ಅಚ್ಚುಕಟ್ಟಾಗಿ ಸಂಪಾದಿಸಿ ಸಮಿತಿಯ ಕೀರ್ತಿಯನ್ನು ಹೆಚ್ಚಿಸಿದ್ದಾರೆ. ಶ್ರೀಯುತರು ಬಸವ ಸಮಿತಿಗೆ ಸಲ್ಲಿಸಿರುವ ಅಮೋಘ ಸೇವೆಯನ್ನು ಮನಗಂಡು ಮೇ ೬, ೨೦೧೧ ರಂದು ಬಸವ ಜಯಂತಿಯ ಶುಭ ಸಂದರ್ಭದಲ್ಲಿ ಹಾಗೂ ಸೆಪ್ಟೆಂಬರ್ ೫, ೨೦೧೭ ರಂದು ಸಂಸ್ಥಾಪಕರ ದಿನಾಚರಣೆಯ ಅಂಗವಾಗಿ ಗೌರವ ಪೂರ್ವಕವಾದ ಅಭಿನಂದನೆಯನ್ನು ಸಲ್ಲಿಸಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇನೆ.

### ಸಾಹಿತ್ಯ ಕ್ಷೇತ್ರ - ಸ್ವತಂತ್ರ ಕೃತಿಗಳು :

ವಿದ್ಯಾರ್ಥಿ ದೆಸೆಯಿಂದಲೂ ಸಾಹಿತ್ಯದ ಗೀಳು ಅಂಟಿಸಿಕೊಂಡ ಮಹಾದೇವಯ್ಯನವರ ಸಾಹಿತ್ಯ ಕೃಷಿ ವೈವಿಧ್ಯಪೂರ್ಣವಾದುದು. ಶರಣ ಸೌರಭ, ಶರಣರ ಬದುಕಿನ ಮೌಲ್ಯಗಳು, ವಚನಗಳಲ್ಲಿ ಮಾನವೀಯ ಮೌಲ್ಯಗಳು, ಬುದ್ಧ, ಬಸವ, ವೀರಶೈವ ವಾಗ್ಮೇಯಕಾರರು, ಹರಿಹರ, ಬಸವಣ್ಣ, ಶಾಂತಿನಾಥ, ಗುಬ್ಬಿಯ ಮಲ್ಲಣಾರ್ಯ, ಜಿ.ಎಂ. ಸಿದ್ಧರಾಮಣ್ಣ, ಬಾಲಮಹಂತ, ವಿಶ್ವಮಾನವ ಬಸವಣ್ಣ (ಹಿಂದಿ ಮತ್ತು ಇಂಗ್ಲೀಷ್), ಮಲ್ಲಿಕಾರ್ಜುನ ಶಿವಯೋಗಿಗಳು, ಮಾನವತೆಯ ಮಂದಾರ (ಡಿ.ಎಂ. ಚಂದ್ರಶೇಖರ್ ಜೀವನ ಚರಿತ್ರೆ), ಅಲ್ಲಮಪ್ರಭು, ಶರಣ ಆದಯ್ಯ, ಶ್ರೀ ಸರ್ಪಭೂಷಣ ಶಿವಯೋಗಿ, ಮಠಕೂರು ನಂಜುಂಡ ಶಿವಯೋಗಿ, ಶಿವಯೋಗಿ ಸಿದ್ಧರಾಮ, ಗರಣಿ ಬಸವಲಿಂಗ ಚಿತ್ರಿಸಿದ ಬಸವಣ್ಣ, ಹರಿಹರ ಚಿತ್ರಿಸಿದ ಪ್ರಭುದೇವರು, ಘಟ್ಟಿವಾಳಯ್ಯ, ಮರುಳಶಂಕರ ದೇವ ಮತ್ತು ಸತ್ಯಕ್ಕ, ಕಾಯಕ-ದಾಸೋಹ- ಚಿಂತನ ಚಿಲುಮೆ, ಚಿಂತನ ಲಹರಿ, ಚಿಂತನ ಬಾಗಿನ, ಚಿಂತನ ತಾಂಬೂಲ, ಚಿಂತನ ಸೌಭಾಗ್ಯ, ಚಿಂತನ ಮಾಲೆ, ಚಿಂತನ ಕಿರಣವೂ ಸೇರಿದಂತೆ ಹಲವಾರು ವಿವಿಧ ಪ್ರಕಾರಗಳಿಗೆ ಸೇರಿದಂತೆ ಪ್ರಕಟವಾಗಿವೆ.

### ಸಂಪಾದಿತ ಕೃತಿಗಳು :

ನಾಂದಿ, ದಲಿತೋ-೧,೨, ಶರಣತತ್ತ್ವ ಚಿಂತನ, ಸಿದ್ಧಗಂಗಾಶ್ರೀ, ದಾಸೋಹ ಸಿರಿ, ಪರಮಪೂಜ್ಯ ಶ್ರೀ ಶ್ರೀಗಳವರ ಶತಮಾನೋತ್ಸವ ಜ್ಞಾನರತ್ನ ಮಾಲೆ, ಅನುಭಾವ ಪಥ, ಉಪನ್ಯಾಸಮಾಲೆ, ಸಮರ್ಪಣೆ, ಬಸವ ಶ್ರೀವಾಣಿ, ಸಿದ್ಧರಾಮ ಶ್ರೀವಾಣಿ, ಜೇಡರ ದಾಸಿಮಯ್ಯ ವಚನಗಳು, ಚೆನ್ನಶಿಕ್ಷಣಸಿರಿ, ನಿರ್ವಾಣಶ್ರೀ, ಮೊದಲಾದ ಕೃತಿಗಳನ್ನು ಅಚ್ಚುಕಟ್ಟಾಗಿ ಸಂಪಾದಿಸಿ ಕೊಟ್ಟಿದ್ದಾರೆ.

ಈಗಾಗಲೇ ಪ್ರಸ್ತಾಪಿಸಿದಂತೆ ನಿಘಂಟು ಕ್ಷೇತ್ರಕ್ಕೆ ತಮ್ಮದೇ ಆದ ಅಮೂಲ್ಯ ಕಾಣಿಕೆ ನೀಡಿದ ಶ್ರೀ ಮಹಾದೇವಯ್ಯನವರು ಕನ್ನಡ-ಕನ್ನಡ ನಿಘಂಟು (ಎಂಟು ಸಂಪುಟಗಳು)ಗಳ ಜೊತೆಗೆ ಕನ್ನಡ ಜಾನಪದ ಕೋಶ, ಕನ್ನಡ ಸಂಕ್ಷಿಪ್ತ ಪದಕೋಶ, ರತ್ನಕೋಶ, ಕಾನೂನು ಪದಕೊಶ, ಸಚಿತ್ರ ಶಾಲಾ ನಿಘಂಟು ಇತ್ಯಾದಿಗಳನ್ನು ಹೊರತರುವಲ್ಲಿ ಅವರ ಪ್ರಾಮಾಣಿಕ ಸೇವೆ ಅಮೂಲ್ಯವಾದುದು. ಇವುಗಳ ಜೊತೆಗೆ ಮೂವತ್ತಕ್ಕೂ ಹೆಚ್ಚು ಸಂದರ್ಭ ಸಂಚಿಕೆಗಳ ಸಂಪಾದಕರಾಗಿ ಕಾರ್ಯನಿರ್ವಹಿಸಿದ ಹೆಗ್ಗಳಿಕೆ. ಅಕಾಶವಾಣಿಯಲ್ಲಿ ಇವರ ನೂರಾರು ಚಿಂತನೆಗಳು, ರೂಪಕಗಳು ಬಿತ್ತರಗೊಂಡಿವೆ.

### ಸಂಘ ಸಂಸ್ಥೆಗಳು :

ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಕರ್ನಾಟಕ ಸರ್ಕಾರದ ರಾಜಭಾಷಾ ಆಯೋಗದ ಸದಸ್ಯರಾಗಿ ಸೇವೆ ಸಲ್ಲಿಸಿರುವ ಶ್ರೀಯುತರು, ಅನೇಕ ತರುಣ ಬರಹಗಾರರಿಗೆ ಮಾರ್ಗದರ್ಶಕರಾಗಿ, ವಚನಜ್ಯೋತಿ ಬಳಗ, ನಾಗರಭಾವಿ ಬಸವ ಬಳಗವೂ ಸೇರಿದಂತೆ ಮೂವತ್ತಕ್ಕೂ ಹೆಚ್ಚು ಸಂಘ ಸಂಸ್ಥೆಗಳಲ್ಲಿ ಗೌರವಾನ್ವಿತ ಹುದ್ದೆಗಳ ಸ್ಥಾನವನ್ನು ಪಡೆದು ಆಯಾ ಸ್ಥಾನಗಳಿಗೆ ಘನತೆ ಗೌರವವನ್ನು ತಂದುಕೊಟ್ಟಿದ್ದಾರೆ. ಸಮಾಜ ಸೇವೆಗೆ ಒಂದು ನಿಜವಾದ ಅರ್ಥ, ಬೆಲೆ ಬಂದಿರುವುದು ಶ್ರೀ ಟಿ.ಆರ್.ಎಂ. ಅವರಂಥವರು ನಿಸ್ವಾರ್ಥ ಸೇವೆ ಮಾಡಿದ್ದರಿಂದ ಎಂಬ ಮಾತು ಉತ್ಪ್ರೇಕ್ಷೆಯಲ್ಲ. ಸಾರ್ವಜನಿಕ ಕೆಲಸಗಳು ಅವರು ಬೇಡವೆಂದರೂ ಬಿಡದೆ ಬೆನ್ನತ್ತಿ ಬರುತ್ತಿದ್ದರು. ಸಂಕೋಚ ಸ್ವಭಾವದವರಾಗಿದ್ದ ಮಹಾದೇವಯ್ಯನವರು ಅನೇಕ ಸಲ ದಾಕ್ಷಿಣ್ಯಕ್ಕಾಗಿ ಕೆಲಸಗಳನ್ನು ಒಪ್ಪಿಕೊಂಡು ತೊಂದರೆ ಅನುಭವಿಸಿದ್ದುಂಟು. ಇವರು ಕೆಲಸ ಒಪ್ಪಿಕೊಂಡರೆ ಕಾರ್ಯಕರ್ತರಿಗೆ ನಿಶ್ಚಿಂತೆ. ಹಾಗಾಗಿ ಮಹಾದೇವಯ್ಯನವರಿಗೆ ಕೆಲಸದ ಒತ್ತಡ ಮೇಲಿಂದ ಮೇಲೆ ಬೀಳುತ್ತಿದ್ದವು.

ಹೌದು! ಕೆಲಸ ಮಾಡುವವರ ಮೇಲೆಯೇ ಹೊರೆ ಹೆಚ್ಚು ಬೀಳುತ್ತದೆ ಎಂಬ ಲೋಕೋಕ್ತಿಗೆ ಶ್ರೀಯುತರು ಹೊರತಾದವರಲ್ಲ.

ಕಣ್ಣು, ಕೈ, ಮನಗಳಿಗೆ ಬಿಡುವನ್ನೇ ಕೊಡದ ಶ್ರೀ ಟಿ.ಆರ್. ಮಹಾದೇವಯ್ಯ ಅವರದು ದಣಿವರಿಯದ ದುಡಿಮೆ. ತಮ್ಮಿಂದ ಹತ್ತು ಜನರಿಗೆ ಸಹಾಯವಾದರೆ ಜನ್ಮ ಸಾರ್ಥಕ ಎಂದು ಭಾವಿಸಿದ್ದ ಪರೋಪಕಾರಿ, ಸ್ತುತಿ-ನಿಂದೆಗಳಿಗೆ, ಮನದಲ್ಲಿ ಕೋಪವ ತಾಳದ ಸಮಾಧಾನ ಚಿತ್ತರಾಗಿದ್ದ ತಣ್ಣನೆಯ ಶಾಂತಿದೀಪ.

## ಪ್ರಶಸ್ತಿ-ಗೌರವಗಳು :

ಶ್ರೀ ಮಹಾದೇವಯ್ಯನವರು ಕೀರ್ತಿ, ಹೆಸರಿಗಾಗಿ ಹಂಬಲಿಸಿದವರಲ್ಲ. ಪ್ರಶಸ್ತಿಗಾಗಿ ಲಾಬಿ ಮಾಡಿದವರಲ್ಲ, ಒಂದು ವೇಳೆ ಅವರು ಲಾಬಿ ಮಾಡಿದ್ದರೆ ಅನೇಕ ಸರ್ಕಾರಿ ಪ್ರಶಸ್ತಿಗಳನ್ನು ತಮ್ಮ ಮುಡಿಗೇರಿಸಿಕೊಳ್ಳಬಹುದಿತ್ತು. ಅವರು ಒಬ್ಬ ಶ್ರೇಷ್ಠ ವಿದ್ವಾಂಸರಾಗಿದ್ದರೂ ಕರ್ನಾಟಕ ಸರ್ಕಾರ ಅವರ ಪ್ರತಿಭೆಯನ್ನು ಗುರುತಿಸಿ ಗೌರವಿಸುವ ಸ್ತುತ್ಯಾರ್ಹವಾದ ಕಾರ್ಯ ಮಾಡಲಿಲ್ಲ. ಕರ್ನಾಟಕ ಸರ್ಕಾರ ಕೊಡ ಮಾಡುವ ಕನ್ನಡ ರಾಜ್ಯೋತ್ಸವ ಪ್ರಶಸ್ತಿಯಾಗಲಿ, ಹಂಪಿ ಕನ್ನಡ ವಿಶ್ವವಿದ್ಯಾಲಯವೂ ಸೇರಿದಂತೆ ವಿಶ್ವವಿದ್ಯಾಲಯಗಳು ಗೌರವ ಡಾಕ್ಟರೇಟ್ ಪದವಿಯನ್ನು ಕೊಡಲೇ ಇಲ್ಲ. ಅವರು ಈ ಗೌರವವನ್ನು ಕನಸು ಮನಸ್ಸಿನಲ್ಲೂ ನಿರೀಕ್ಷಿಸದೆ ಇದ್ದರೂ, ಅವರು ಕೊಡಮಾಡಿದ ಸಾಹಿತ್ಯ ಸೌರಭವನ್ನು ಆಸ್ವಾದಿಸಿದವರಿಗೆ, ಪಾಂಡಿತ್ಯದ ಪರಿಚಯವಿದ್ದವರಿಗೆ ನಿರಾಸೆಯಾದುದಂತೂ ಸತ್ಯ.

ಸರ್ಕಾರ ಪ್ರಶಸ್ತಿಯನ್ನು ಕೊಡಿದ್ದರೂ ಸಾರ್ವಜನಿಕ ಸಂಘ ಸಂಸ್ಥೆಗಳು ಪ್ರಶಸ್ತಿಗಳನ್ನು ನೀಡಿ ಗೌರವಿಸಿವೆ. ಅವುಗಳಲ್ಲಿ 'ಶರಣ ಸೌರಭ' ಕೃತಿಗೆ ಕಾವ್ಯಾನಂದ ಪುರಸ್ಕಾರ, ಅವರಿಗೆ ಅರವತ್ತು ತುಂಬಿದ ಶುಭ ಸಂದರ್ಭದಲ್ಲಿ ರಾಜ್ಯಮಟ್ಟದ ಅಭಿನಂದನೆ 'ಸಾತ್ವಿಕ' ಗೌರವ ಗ್ರಂಥ ಸಮರ್ಪಣೆ, ರಾಜಾಜಿನಗರ ಘಟಕದ ಶರಣರ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಬೆಂಗಳೂರು ಬಸವ ವೇದಿಕೆಯ 'ಸಾಹಿತ್ಯಶ್ರೀ' ಪ್ರಶಸ್ತಿ, ರಾಜಾಜಿನಗರ ವಿಧಾನಸಭಾ ಕ್ಷೇತ್ರ ಕನ್ನಡ ಸಾಹಿತ್ಯ ಪರಿಷತ್ತು ಆಯೋಜಿಸಿದ್ದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಬೆಂಗಳೂರು ಮೈಕೋ ಕನ್ನಡ ಬಳಗ ಆಯೋಜಿಸಿದ್ದ ೨೦೦೧ ರ ಕನ್ನಡ ರಾಜ್ಯೋತ್ಸವದ 'ಕಿಟ್ಟೆಲ್ ಪ್ರಶಸ್ತಿ', ಬೆಂಗಳೂರು ನಗರಪಾಲಿಕೆ ೨೦೦೩ರ 'ಕೆಂಪೇಗೌಡ ಪ್ರಶಸ್ತಿ', ಬೆಂಗಳೂರು ಅಖಿಲ ಕರ್ನಾಟಕದ ಭಾಷಾ ಸಮ್ಮೇಳನದ ೧೪ನೇ ಅಧಿವೇಶನದ 'ಸಾಹಿತ್ಯಶ್ರೀ' ಪ್ರಶಸ್ತಿ, ೨೦೦೬ರಲ್ಲಿ ನಿಟ್ಟೂರಿನಲ್ಲಿ ಸಮಾವೇಶಗೊಂಡಿದ್ದ ಗುಬ್ಬಿ ತಾಲ್ಲೂಕು ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಬೆಂಗಳೂರಿನಲ್ಲಿ ನಡೆದ ೭೭ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ, ೨೦೧೧ರಲ್ಲಿ ತುಮಕೂರು ಜಿಲ್ಲಾ ಉತ್ಸವದಲ್ಲಿ ಜಿಲ್ಲಾಡಳಿತದಿಂದ ಸನ್ಮಾನ, ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಸಮ್ಮೇಳನವೂ ಸೇರಿದಂತೆ, ಗೌರವ ಪ್ರಶಸ್ತಿಗಳು ಸಂದಿವೆ. ಸಂಘಜೀವಿ, ಸರಳ ಸಜ್ಜನಿಕೆಯ ಸ್ನೇಹಜೀವಿ, ಸಂಸ್ಕಾರ ಸೌರಭಿ, ಸುಖಸಂಸಾರಿ, ವನಸುಮಗದೊಳೆನ್ನ ಜೀವನವು ವಿಕಸಿಸುತಂತೆ ಮನವನು ಗ್ರಹಿಸುದೇವಾ' ಎಂಬ ಧ್ಯಾನ ಸಂಪನ್ನರಾಗಿದ್ದ ಶ್ರೀ ಟಿ.ಆರ್. ಮಹಾದೇವಯ್ಯನವರು ಸೆಪ್ಟೆಂಬರ್ ೩೦ ೨೦೧೭ ರಂದು ವಿಧಿವಶರಾದರು. ಇಂದು ನಮ್ಮ ಮಧ್ಯ ಇಲ್ಲದೆ ಹೋದರು ಅವರು ಬಿಟ್ಟುಹೋದ ಮಾನವೀಯ ಮೌಲ್ಯಗಳು, ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಶ್ರೀಮಂತ ಕೊಡುಗೆ ನಮ್ಮಲ್ಲಿ ಸದಾ ಹಚ್ಚಹಸಿರಾಗಿರುತ್ತದೆ.

ಅವರು ತಮ್ಮ ದೇಹವನ್ನು ದಾನ ಮಾಡುವುದರ ಮೂಲಕ ಮಾನವೀಯತೆಯನ್ನು ಮೆರೆದರು. ತಮ್ಮ ಸಾವಿನ ನಂತರ ತಮ್ಮ ದೇಹ ಹತ್ತು ಜನ ವಿದ್ಯಾರ್ಥಿಗಳಿಗೆ ಸದುಪಯೋಗವಾಗಲಿ ಎಂಬ ಸದುದ್ದೇಶದಿಂದ ವೈದ್ಯಕೀಯ ಕಾಲೇಜಿಗೆ ನೀಡುವಂತೆ ಮೊದಲೇ ತಿಳಿಸಿದ್ದರು. ಅವರ ಆಶಯವನ್ನು ಕುಟುಂಬದವರು ಪೂರೈಸಿದರು. ದೇಹ ದಾನ ಮಾಡುವುದರ ಮೂಲಕ ಇತರರಿಗೆ ಮಾದರಿಯಾದರು.

"..... ಕನ್ನಡ ರಾಜ್ಯದಲ್ಲಿ ಕನ್ನಡವೇ ಅಧಿದೇವತೆ. ಉಳಿದ ಭಾಷೆಗಳು ಪರಿವಾರ ಮಾತ್ರ... ಕನ್ನಡ ನಾಡಿನ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡಕ್ಕೆ ಪ್ರಥಮ ಸ್ಥಾನ ದೊರೆಯಬೇಕು. ಇಲ್ಲಿಯ ಯಾವ ವಿಶ್ವವಿದ್ಯಾನಿಲಯವೂ ದೆಹಲಿ ವಿಶ್ವವಿದ್ಯಾನಿಲಯದ ಬಾಲಂಗೋಚಿಯಾಗಬಾರದು... ರಾಜ್ಯದಲ್ಲಿ ಬಾಳಬೇಕೆನ್ನುವ ಜನರೆಲ್ಲ ಹಾಗೂ ಸರ್ಕಾರಿ ನೌಕರಿ ಬೇಕಾದವರೆಲ್ಲ ಕಡ್ಡಾಯವಾಗಿ ಕನ್ನಡ ಕಲಿಯಬೇಕು. ಕನ್ನಡ ಗೊತ್ತಿಲ್ಲದವರಿಗೆ ಸರ್ಕಾರದಲ್ಲಾಗಲಿ, ಖಾಸಗಿ ಸಂಸ್ಥೆಗಳಾಗಲಿ ನೌಕರಿ ಕೊಡಕೂಡದು.... ಕನ್ನಡಿಗರು ತಂತಮ್ಮ ಭಿನ್ನತೆಗಳನ್ನು ತೊರೆದು ಸ್ವಾರ್ಥವನ್ನು ಮರೆತು, ಒಟ್ಟುಗೂಡಿ, ಧೈರ್ಯದಿಂದ ವರ್ತಿಸದಿದ್ದರೆ ಬೆಳಗಾವಿ ಕಳಚಿ ಹೋದೀತು... ನುಡಿಯ ಅಳಿವುಳಿವು; ನಮ್ಮ ಅಳಿವುಳಿವು ನಾಡು ನುಡಿಗಳೊಳಗೊದಗುವ ಅನ್ಯಾಯ ಅಪಚಾರಗಳನ್ನು ಸಹಿಸೆವು; ನಾಡು ನುಡಿಗಳ ಅಭ್ಯುದಯವೊಂದೇ ನಮ್ಮ ಬಾಳಿನ ಏಕೈಕ ಗುರಿ...."

– ಡಾ. ದೇ. ಜವರೇಗೌಡ





# ನಡೆ-ನುಡಿಯೊಳಗೆ ಮತ್ತೊಂದು ಕಾಣದಂತಿರಬೇಕು

– ಸ.ರಾ. ಸುಳಕೂಡೆ *

ಜಗತ್ತು ದಾಖಲೆಯ ಯಶಸ್ಸು-ಶ್ರೇಯಸ್ಸು, ಪ್ರಗತಿ-ಪ್ರಯೋಗ, ಶಿಸ್ತು, ಸಡಗರದಂತೆ ಅಸ್ತವ್ಯಸ್ತ, ವಿಗತಿ, ವಿವಾದ, ಪ್ರಮಾದಗಳನ್ನು ಕಂಡಿದೆ. ಅಂದರೆ ಒಳಿತು-ಕೆಡಕುಗಳಿಂದ ಈ ಜಗತ್ತು ಕೂಡಿಕೊಂಡಿದೆ. ಒಳಿತು-ಕೆಡಕುಗಳನ್ನು ಗಮನಿಸುತ್ತ, ಗಮನಿಸುತ್ತ ಹೋದಂತೆ, ನಮ್ಮ ನಡೆ-ನುಡಿಗಳಲ್ಲಿಯ ಭಿನ್ನತೆಯನ್ನೇ ಬೆರಳು ಮಾಡಿ ತೋರಿಸುವ ಪ್ರಸಂಗವು ಎದುರಾಗುತ್ತದೆ. ಇಲ್ಲಿ ಮನುಷ್ಯ ತನ್ನ ಬದುಕಿಗಾಗಿ ಹಗಲು ವೇಷ ಹಾಕಿಕೊಂಡಿದ್ದು ಸತ್ಯನಾದರೆ, ಅನೇಕ ವೇಷಗಳನ್ನು ಕಳಚಿಕೊಂಡು, ಎಲ್ಲವನ್ನು ತೂರೆದು ನಿಂತ ಸತ್ಯವು ಗೋಚರಿಸದಿರದು. ಮನುಷ್ಯನು ತಿಳಿದೋ ತಿಳಿಯದೆಯೋ ಅಥವಾ ಭ್ರಮಿತನಾಗಿಯೂ ನಿತ್ಯ ಒಳಿತು ಕೆಡಕಿನ ದಡ ತಟ್ಟುತ್ತಲೇ ಇರುತ್ತಾನೆ.

**ಜನಮೆಚ್ಚಿ ಶುದ್ಧನಲ್ಲದೆ ಮನಮೆಚ್ಚಿ ಶುದ್ಧನಲ್ಲವಯ್ಯಾ,**
**ನುಡಿಯಲ್ಲಿ ಜಾಣನಲ್ಲದೆ, ನಡೆಯಲ್ಲಿ ಜಾಣನಲ್ಲಯ್ಯಾ,**
**ವೇಷದಲ್ಲಿ ಅಧಿಕನಲ್ಲದೆ, ಭಾಷೆಯಲ್ಲಿ ಅಧಿಕನಲ್ಲವಯ್ಯಾ,**
**ಧನ ದೊರಕದಿದ್ದಡೆ ನಿಸ್ಪೃಹನಲ್ಲದೆ, ಧನ ದೊರಕಿ**
**ನಿಸ್ಪೃಹನಲ್ಲವಯ್ಯಾ,**
**ಏಕಾಂತ ದ್ರೋಹಿ ಗುಪ್ತಪಾತಕ, ಯುಕ್ತಿ ಶೂನ್ಯಂಗೆ**
**ಸಕಳೇಶ್ವರದೇವ ಒಲಿ ಒಲಿಯೆಂದಡೆ**
**ಎಂತೊಲಿವನಯ್ಯಾ?**

ಮನುಷ್ಯನು ತನ್ನ ಸಹಚರರಿಗೆ ಸತ್ಯವಂತನೂ, ನೀತಿವಂತನೂ, ಅಹರ್ನಿಶಿಯಾಗಿ ವಿಶ್ವಾಸವುಳ್ಳವನಾಗಿಯೂ ತೋರಿಕೆಯೊಳಗಿದ್ದರೂ ಅವನ ಇರುವಿಕೆಯು ಸತ್ಯವನ್ನೇ ಮತ್ತು ಒಳಿತನ್ನೇ ಹೊಂದಿರುತ್ತದೆಂದು ಹೇಳಲಿಕ್ಕಾಗದು ಅವನಿಗೆ ಗೊತ್ತು ಗೊತ್ತಿಲ್ಲದೆ ಅನೇಕ ಅವಾಂತರಗಳು, ವಿಸಂಗತಿಗಳು ಜರುಗಿ, ಹೀಗೇಕಾಯ್ತು ಎಂಬ ಸಂದಿಗ್ಧತೆ ಒಳಗೊಳ್ಳುವಂತೆ ಮಾಡಿದ್ದು, ನಿತ್ಯದ ಮಾತಾಗಿದೆ. ಶರಣರು ನುಡಿಯಲ್ಲಿ ಜಾಣನಲ್ಲದೆ, ನಡೆಯಲ್ಲಿ ಜಾಣನಲ್ಲಯ್ಯ ಎಂಬ ವಿಮರ್ಶೆಯ ಸೂತ್ರವನ್ನು ಪಸರಿಸಿದ್ದು, ಸತ್ಯವೆಂಬುದು ಅಂತರಂಗ-ಬಹಿರಂಗಕ್ಕೂ ಸಂಬಂಧಿಸಿದೆಂದಿದ್ದಾರೆ. ಶರಣರು, ಸತ್ಯವು ಸಾಕಾರಗೊಂಡು ನಿಶಬ್ದಗೊಂಡಿರಬೇಕೆಂಬ ಅನುಭಾವ ಹಂಚಿಕೊಂಡಿದ್ದಾರೆ. ವಾಸ್ತವದೊಳಗೆ ಮನುಷ್ಯರೆಲ್ಲರೂ ಒಳ್ಳೆಯವರು, ಸತ್ಯವಂತರು, ವಿಶ್ವಾಸಿಕರೆಂದು ಹೇಳುತ್ತಲೂ, ಹಾಗೆ ನಂಬುವಂತೆ ಮಾಡುತ್ತಲೇ ಇರುತ್ತಾರೆ. ಆದರೆ ಅವರು ತಮ್ಮ ಗತ್ತುಗಾರಿಕೆಯನ್ನು ಬಿಟ್ಟುಕೊಡದೇ ತಮ್ಮ ಹಿತಾಸಕ್ತಿಯನ್ನು ಸಾಧಿಸುವ ಸೋಗನ್ನು ಚೆನ್ನಾಗಿಯೇ ನಿಭಾಯಿಸಿದ್ದು, ತಡವಾಗಿ ಗೊತ್ತಾಗುತ್ತದೆ. ಮೋಸಗಾರರು ಸವಿ ಸವಿಯಾದ ಮಾತುಗಳನ್ನಾಗಿ ನಂಬಿಸಿ ಇದ್ದುದೆಲ್ಲವನ್ನು ನಾಜೂಕಿನಿಂದ ಲಪಟಾಯಿಸಿದ್ದು, ಜಗ ಕಂಡ ಸತ್ಯವೇ ಆಗಿದೆ. ಬಂಗಾರ ಕಂಡರೂ ಕಣ್ಣೆತ್ತಿ ನೋಡುವವರು ನಾವಲ್ಲೆಂದು ಅದೆಷ್ಟೋ ಬಡಾಯಿ ಕೊಚ್ಚಿಕೊಳ್ಳುವವರು, ಗಾಜಿನ ಚೂರನ್ನು ಬಿಡುವ ಅಸಾಮಿಗಳೆಂದು ಜನ ಮಾತಾಡಿಕೊಳ್ಳುವಲ್ಲಿ, ಯಥಾರ್ಥತೆಯ ಮುನ್ನೋಟವಿದೆ. ಇದನ್ನೇ ಶರಣರು ಹೇಳುವುದೊಂದು, ಮಾಡುವುದು ಇನ್ನೊಂದೆಂದು ಸಮೀಕರಿಸಿದ್ದಾರೆ. ಧನ ದೊರಕದಿದ್ದರೆ ನಿಸ್ಪೃಹರಾಗಿ ಕಂಡವರನ್ನು ಜಗತ್ತು ಇಂದಿಗೂ ಚೆನ್ನಾಗಿಯೇ ಗುರುತಿಸಿದೆ. ಅಧಿಕಾರವಿಲ್ಲದಿದ್ದಾಗ ಜನರು, ಏನೇನೋ ಭಾಷೆ-ಭರವಸೆಗಳನ್ನು ಕೊಡುತ್ತ ನಂಬಿಸುತ್ತಾರೆ. ಅವರು ಅಧಿಕಾರಕ್ಕೆ ಬಂದಾಗ, ಅದಕ್ಕೆ ತದ್ವಿರುದ್ಧವಾಗಿ ನಡೆದುಕೊಳ್ಳುವುದು ನಿತ್ಯ ಕಂಡ ಸತ್ಯವಾಗಿದೆ. ಬಾಯಿ ಮಾತಿನೊಳಗೆ ಅಸಂಖ್ಯಾತರು ಪ್ರಾಮಾಣಿಕತೆಯ ಸೊಲ್ಲನ್ನು ಎತ್ತರಿಸಿಕೊಂಡರಿವುದೇ ಬಹಳಷ್ಟಿದೆ. ಅವರೆಲ್ಲರಲೂ ನಡೆಯೊಳಗೂ ಪ್ರಾಮಾಣಿಕರಾಗಿದ್ದರೆ, ಈ ಜಗದೊಳಗಿನ ಅಸಂಖ್ಯ ಗದ್ದಲ, ಗೊಂದಲ, ಅಪರಾಧ, ಹೊಡೆದಾಟ, ಕಾಳಗ, ಕದನಗಳೆಲ್ಲವೂ ಬಯಲಾಗಿ ಹೋಗಿರುತ್ತಿದ್ದವು. ಶರಣರು ಸತ್ಯ-ಶುದ್ಧ ಕಾಯಕದಿ ನಿರತಗೊಂಡು, ವೇಷಧಾರಿಗಳಾಗದೇ ಬದುಕಿದರಲ್ಲದೇ ಕೊಟ್ಟ ಮಾತು ತಪ್ಪದಂತೆಯೂ ಜಾಗೃತಿಯನ್ನು ವಹಿಸಿದ್ದು, ಮನನ ಯೋಗ್ಯವಾಗಿದೆ. ನಡೆ-ನುಡಿಯೊಳಗೆ ಎಳ್ಳಷ್ಟು ಅಂತರವಿರದಂತೆ ನೋಡಿಕೊಳ್ಳುವುದೆಂದರೆ, ಪ್ರಶಾಂತಿಯನ್ನು ಅಂತರಂಗ-ಬಹಿರಂಗದೊಳಗೆ ತಂದುಕೊಳ್ಳುವುದು ಮತ್ತು ಮಸಲತ್ತು-ಮೋಹ, ಚಾಲಾಕಿತನದಿಂದ ದೂರವಿರುವುದಾಗಿದೆ. ಹೀಗೆ ನಡೆದುಕೊಂಡಾಗ ಮಾನವೀಯ ವೈಭವ ತನ್ನಿಂದ ತಾನೆ ಕಂಗೊಳಿಸದೇ ಇರಲಾರದು.

*# ೧೩೮೯, "ಶ್ರೀ ಶಿವಪ್ರಸಾದ" ರಾಮತೀರ್ಥನಗರ, ಬೆಳಗಾವಿ-೧೬

ಕುಭಾಷೆ ಸುಭಾಷೆಯ ಕೇಳದಂತಿರಬೇಕು,
ಮೃದು ಕಠಿಣಂಗಳ ನಾರಯ್ಯದಂತಿರಬೇಕು,
ರಸಗಂಧಂಗಳ ಅರಿಯದಂತಿರಬೇಕು,
ಲಿಂಗವಲ್ಲದೇ ಮತ್ತೊಂದು ಕಾಣದಂತಿರಬೇಕು,
ಇಂದ್ರಿಯಂಗಳ ಬಳಿಸಂದಲ್ಲದೆ
ದೇವ ಸಕಳೇಶ್ವರ ದೇವನನೊಲಿಸಬಾರದು.

ವಾಸ್ತವತೆಯನ್ನು ಅರ್ಥೈಸಿಕೊಂಡು ಬದುಕುವುದೆಂದರೆ ತಮ್ಮ-ತಮ್ಮ ಕುಚೇಷ್ಟೆಗಳನ್ನು ತಹಬಂದಿಗೆ ತಂದುಕೊಂಡು, ಇಂದ್ರಿಯಗಳನ್ನು ಹತೋಟಿಯೊಳಗಿಟ್ಟು ಸಹಜತೆಯೊಳಗೆ ಬದುಕುವ ರೀತಿಯೇ ಆಗಿದೆ. ಹೀಗಾದಲ್ಲಿ ನಡೆ-ನುಡಿಯ ಏಕತೆಯ ಬೆಳಕು ತುಂಬಿಕೊಂಡಿರುತ್ತದೆ. ಶರಣರು ಈ ಬದುಕು ಭವ್ಯ-ದಿವ್ಯಗೊಳ್ಳಲು ನಡೆ-ನುಡಿಯೊಳಗಿನ ಗೊಂದಲ ನಿವಾರಿಸಿಕೊಂಡಿರುವ ವಿಧಾನವು, ವೈಚಾರಿಕತೆಯ ನೆಲೆಯೊಳಗೂ ಸಿದ್ಧಿ ಹೊಂದಿದೆ. ಮಾನವೀಯ ಗುಣ ವಿಶೇಷತೆಯೊಳಗೆ ಸಮತೋಲನ ಕಾಯ್ದುಕೊಂಡಿರುವ ಶರಣರು, ಕುಭಾಷೆ-ಸುಭಾಷೆಯ ಕೇಳದಂತಿರಬೇಕು, ಮೃದು ಕಠಿಣಗಳ ಕಾಟಕ್ಕೆ ಒಳಗೊಳ್ಳದಂತಿರಬೇಕೆಂಬುದನ್ನು ಮನಗಂಡು ಮಾತಾಡಿ, ನಡೆದು ಕೊಂಡಿದ್ದಾರೆ. ಬದುಕಿನೊಳಗೆ ಒಂದಿಲ್ಲೊಂದು ಒಳಿತು-ಕೆಡುಕುಗಳು ಸಂಭವಿಸುತ್ತಲೇ ಇರುತ್ತವೆ. ಒಳಿತಿಗೆ ಹಿಗ್ಗಿ, ಕೆಡಕಿಗೆ ಕುಗ್ಗಿ ಬದುಕಿನ ಪಥವನ್ನು ಬಿಗಡಾಯಿಸಿಕೊಳ್ಳದಿರುವುದೇ ಬದುಕಿನ ದಿವ್ಯತೆಯ ಭಾಗವಾಗಿದೆ. ಎಲ್ಲಾ ಯಶಸ್ಸು ತನ್ನದೆಂದು, ಸೋಲಿಗೆಲ್ಲ ಪರರೆಂಬುದು ಲೋಕ ರೂಢಿಯೇ ಆಗಿದೆ. ಸೋಲು-ಗೆಲುವಿನ ಮಾತುಕತೆಗಳಾಚೆ ಬದುಕಿನ ಬೆಳಕಿದೆ, ಈ ಬೆಳಕಿನೊಳಗೆ ಬದುಕುವುದೆಂದರೆ ಶರಣರಂತಾಗುವುದೇ ಆಗಿದೆ.

ಬದುಕಿನ ಸಾರ-ಸತ್ವವೆಲ್ಲವೂ ಸತ್ಯದೊಳಗೆ ಸಮ್ಮಿಳಿತಗೊಂಡಿದೆ. ನಮ್ಮ ನಡಾವಳಿಗಳು ಸುಕೃತಗೊಳ್ಳಬೇಕಾದರೆ ಸಕಲದರೊಳಗೆ ಸತ್ಯವನ್ನೇ ಆಧರಿಸಿಕೊಂಡು, ಹೋಗಬೇಕಾಗುತ್ತದೆ. ಅನುಕೂಲಸಿಂಧುತ್ವ ಅಥವಾ ಲಾಭ-ನಷ್ಟದ ಲೆಕ್ಕಾಚಾರದಡಿ ಸತ್ಯವನ್ನು ಪರಿಪಾಲಿಸುವ ಮನೋಭಾವವು ಎಂದೂ ವ್ಯಕ್ತಿತ್ವಕ್ಕೆ ಭೂಷಣ ತಂದುಕೊಡಲಾರದು. ಸತ್ಯವನ್ನು ಪರಿಪಾಲಿಸುವ ನಡೆ-ನುಡಿಗಳನ್ನು ಹೊಂದುವುದೆಂದರೆ, ಸಂಯಮ-ಸುಶೀಲ ಬದುಕನ್ನು ಚಾಚು ತಪ್ಪದೆ ನಡೆಸಿಕೊಂಡು ಹೋಗುವುದಾಗಿದೆ, ಶರಣರು, ತಮ್ಮ ಬದುಕನ್ನು ಚಿತ್ತ ಚಂಚಲ್ಯತೆಗೆ ಒಳಗೊಳ್ಳದಂತೆ ನೋಡಿಕೊಂಡಿದ್ದರಿಂದಲೇ ಪರಧನ, ಪರಸತಿ, ಪಟ್ಟ-ಪದವಿ ಮುಂತಾದ ದುರಾಸೆಗಳಿಗೆ ಸೊಪ್ಪು ಹಾಕಲಿಲ್ಲ. ಅವರು ನುಡಿಯೊಳಗೆ ಸಾಧಿಸಿದ ಸಿದ್ಧಿಯನ್ನೇ ನಡೆಯನ್ನಾಗಿಸಿಕೊಂಡು ನಂಬಿದಂತೆ ನಡೆದುಕೊಂಡರು, ಬದುಕಿನ ಗೆಲುವನ್ನೇ ತುಂಬಿಕೊಂಡರು.

ಕರ್ತನೊಬ್ಬನೆ ದೇವ, ಸತ್ಯವೇ ಸುಭಾಷೆ,
ಭೃತ್ಯಾಚಾರವೇ ಆಚಾರವಯ್ಯಾ,
ಮತ್ತೆ ದೇವರಿಲ್ಲ, ಮತ್ತೆ ಆಚಾರವಿಲ್ಲ,
ಮತ್ತೆ ಸುಭಾಷೆಯೆಂಬುದಿಲ್ಲ,
ಮಹಂತ ಸಕಳೇಶ್ವರದೇವರನೊಲಿಸಿದ ಪುರಾತನ
ಪಥವಿದು,
ಅವಿತಥವಿಲ್ಲದೆ ನಂಬುವದು.

ಮಾನವನ ಬದುಕಿನೊಳಗೆ ನುಡಿ ನಡೆಗಳೆಲ್ಲವೂ ಮಹೋನ್ನತಿಯ ಸೊಬಗನ್ನು ಕೇಂದ್ರಕರಿಸಿಕೊಳ್ಳುವಲ್ಲಿ, ನಂಬುಗೆಯ ಪಾತ್ರವು ಅತ್ಯಂತ ಪ್ರಾಸಂಗಿಕವಾಗಿರುತ್ತದೆ. ನಮ್ಮಲ್ಲಿ ನಂಬಿಕೆಯು ಗಟ್ಟಿಯಾಗಿದ್ದಷ್ಟು ಸಹಚರರು ಮಾನ್ಯತೆ ಕೊಡುತ್ತಾರೆ. ಯಾರನ್ನು ನಾವು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕಾದರೆ, ನಮ್ಮಲ್ಲಿ ಪರಿಪೂರ್ಣವಾದ ವಿಶ್ವಾಸವನ್ನು ಪಾಲಿಸಿಕೊಂಡು ಹೋಗುವ ಗಟ್ಟಿತನವಿರಬೇಕಾಗುತ್ತದೆ. ಈ ತೆರನಾದ ಗಟ್ಟಿಕೊಂಡ ವಿಶ್ವಾಸವೇ ಸುಭಾಷೆಯಾಗಿ ನಮ್ಮನ್ನು ಮತ್ತು ನಮ್ಮನ್ನು ನಂಬಿದವರನೆಂದೂ ಕೈ ಬಿಡಲಾರದು ಬದುಕಿನಲ್ಲಿ ಎಂತಹ ದುರ್ಧರ ಪ್ರಸಂಗವು ಬಂದರೂ, ಆ ಪ್ರಸಂಗಗಳು ವಿಶ್ವಾಸದ ನಮ್ಮ ನಡಾವಳಿಯನ್ನು ಎಂದೂ ವಿಚಲಿತಗೊಳಿಸಲಾರವು. ಅದರಂತೆ ನಾವು ಯಾವ ಕಾಲಕ್ಕೂ ತಪ್ಪು ದಾರಿಯೊಳಗೆ ನಿಲ್ಲುವ ಪ್ರಸಂಗ ಬರಲಾರದು. ಶರಣರು ನಡೆ-ನುಡಿಗಳಿಗೆ ಕೊಟ್ಟ ಪ್ರಾಶಸ್ತ್ಯವು, ವಿಶ್ವಮಾನ್ಯ ವಿಶ್ವಾಸಕ್ಕೆ ಪಾತ್ರರಾದ ಸಂಗತಿಗಲ್ಲಿ ಒಂದಾಗಿದೆ. ಯಾರು ಕೊಟ್ಟ ಮಾತಿಗೆ ತಪ್ಪಲಾರರು, ಅವರಿಗಿಂತ ಶ್ರೇಷ್ಠವಾದ ಮಾನವ ನಡಾವಳಿ ಇನ್ನೊಂದಿಲ್ಲ. ಯಾರನ್ನೂ ನೋಯಿಸದ ಮಾತು ಕೃತಿಗಳು ಸಾಂಗಗೊಂಡಲ್ಲಿ ವಿಶ್ವಶಾಂತಿಯು ತನ್ನಿಂದ ತಾನೇ ನೆಲೆಗೊಳ್ಳುವುದು.

ಶರಣರು ಎನಗಿಂತ ಕಿರಿಯರಿಲ್ಲ ಎಂದು ನಡೆದು-ನುಡಿದದ್ದು, ವಿಶ್ವದೊಳಗೆ ಮನುಷ್ಯನು, ಮನುಷ್ಯನಲ್ಲಿ ಹೊಂದಿರಬೇಕಾದ ವಿಶ್ವಾಸದ ಪ್ರತೀಕವೇ ಆಗಿದೆ. ಎಲ್ಲರೊಡನೆ ಬೆರೆತು ಯಾವುದೇ ತರ-ತಮ ಭಾವ ಹೊಂದದೆ ವಿಶ್ವಾಸಕ್ಕೆ ದ್ರೋಹ ಬಗೆಯದೇ ಜೀವಿಸುವುದೆಂದರೆ, ನಡೆ-ನುಡಿಯೊಳಗೆ ಯಾವುದೇ ಕೊಂಕು, ಮಂಕುತನ, ಮನೆ ಮುರುಕುತನಕ್ಕೆ ಅವಕಾಶವಿಲ್ಲದೇ ಬದುಕುವುದಾಗಿದೆ. ಇದನ್ನೇ ಶರಣರು ನಡೆ-ನುಡಿಯೊಳಗೆ ಮತ್ತೊಂದು ಕೇಳದಂತಿರಬೇಕೆಂದು ಹೇಳಿದ್ದಾರೆ. ಹೀಗೆ ಕೇಳದಂತೆ ಬಾಳುವುದೆಂದರೆ ಕುಭಾಷೆ-ಸುಭಾಷೆಯನ್ನು ದಾಟಿ ನಿರ್ಭಾವ ಸ್ಥಿತಿಯನ್ನು ಗಳಿಸುವುದೇ ಆಗಿದೆ.







# ಯೆಲ್ಲೋಸ್ಟೋನ್ ಪಾರ್ಕ್ – ಭೂಗರ್ಭದ ಚಮತ್ಕಾರ

– ಬಿ.ನಂ. ಚನ್ನಪ್ಪ *

**ಯೆ**ಲ್ಲೊಸ್ಟೋನ್ ಪಾರ್ಕ ಅಮೆರಿಕ ಸಂಯುಕ್ತ ಸಂಸ್ಥಾನದ ರಾಕಿ ಪರ್ವತಪ್ರದೇಶದ ವಯೋಮಿಂಗ್ ಪ್ರಾಂತದ ಈಶಾನ್ಯ ಭಾಗದ ಜ್ವಾಲಾಮುಖಿಯ ಪ್ರಸ್ಥ ಭೂಮಿಯಲ್ಲಿದೆ. ಇದನ್ನು ಅಮೆರಿಕ ವು, ೧೮೭೨ರಲ್ಲಿ ಇಡೀ ವಿಶ್ವದಲ್ಲಿಯೇ ಪ್ರಪ್ರಥಮವಾಗಿ "ರಾಷ್ಟ್ರೀಯ ವನ"ವೆಂದು ಶಾಸನ ಬದ್ಧವಾಗಿ ಘೋಷಿಸಿತು. ಇದರ ವಿಸ್ತೀರ್ಣ ೨೨ಲಕ್ಷ ಎಕರೆಗಳು. ಇದರಲ್ಲಿ ಅನೇಕ ಬಿಸಿನೀರಿನ ಚಿಲುಮೆಗಳು, ಶುಭ್ರವಾದ ತಿಳಿನೀರಿನ ಸರೋವರಗಳು, ಘರ್ಜಿಸುವ ಜಲಪಾತಗಳು, ಕುದಿಯುತ್ತಿರುವ ಮಣ್ಣಿನ ಹೊಂಡಗಳು, ಸುಂದರ ನೈಸರ್ಗಿಕ ದೃಶ್ಯಾವಳಿಗಳು, ಯಲ್ಲೊಸ್ಟೋನ್ ಕ್ಯಾನ್ಯನ್ ಮತ್ತು ಅಪರೂಪದ ಕಾಡುಪ್ರಾಣಿಗಳನ್ನು ನೋಡಬಹುದಾಗಿದೆ. ಬಿಸಿ ನೀರಿನ ಚಿಲುಮೆಗಳನ್ನು ಐಸ್ ಲ್ಯಾಂಡ್ ಮತ್ತು ನ್ಯೂಜಿಲ್ಯಾಂಡ್ ದೇಶಗಳಲ್ಲಿ ನೋಡಬಹುದಾದರೂ ಇಲ್ಲಿರುವಷ್ಟು ಬೇರೆಲ್ಲೂ ಸಿಗುವುದಿಲ್ಲ. ಈ ಪ್ರದೇಶವು ೧೧,೩೫೮ ಅಡಿಗಳವರೆಗೆ ಎತ್ತರವಾಗಿದ್ದು, ಅನೇಕ ಬಗೆಯ ಸಸ್ಯಸಂಕುಲ ಹಾಗೂ ಕಾಡುಪ್ರಾಣಿಗಳಾದ ಕಂದು ಕರಡಿಗಳು, ಕರಿ ಕರಡಿಗಳು, ಕಾಡು ಕೋಣಗಳು, ಕಡವೆಗಳು, ಎಲ್ಕ್(ಜಿಂಕೆಜಾತಿ), ತೋಳಗಳು, ಬಗೆ ಬಗೆಯ ಸಸ್ತನಿಗಳು ಮತ್ತು ೩೨೦ಕ್ಕೂ ಹೆಚ್ಚು ಬಗೆಯ ಹಕ್ಕಿ ಪಕ್ಷಿಗಳಿಗೆ ಆವಾಸಸ್ಥಾನವಾಗಿದೆ. ಇದೊಂದು ಭೂಗರ್ಭದ ಚಟುವಟಿಕೆಯ ಅದ್ಭುತ ತಾಣವಷ್ಟೇ ಅಲ್ಲದೆ ಪ್ರಕೃತಿ ಸೌಂದರ್ಯದ ಆಕರ್ಷಕ ಲೋಕ.

## ಪ್ರವೇಶ :

ಉತ್ತರ ದಿಕ್ಕಿನ ಮಾಂಟೆನಾ ರಿಜಿಡಿಂತದ ಗಾರ್ಡಿನರ್ ಪಟ್ಟಣ. ಪಶ್ಚಿಮದಿಂದ ವೆಸ್ಟ್ ಯೆಲ್ಲೊ ಸ್ಟೋನ್ ಪಟ್ಟಣದಿಂದ, ದಕ್ಷಿಣದಿಂದ ಜಾಕ್ಸನ್ ಪಟ್ಟಣದಿಂದ ಪೂರ್ವದಿಂದ ಕೋಡಿನಗರದಿಂದ ಮತ್ತು ಈಶಾನ್ಯದಿಂದ ಸಿಲ್ವರ್ ಗೇಟ್ ಹಾಗೂ ಕೂಕ್‌ನಗರದಿಂದ ಪ್ರವೇಶಿಸಬಹುದು. ಹೆಚ್ಚಿನ ಪ್ರವಾಸಿಗಳು ಗಾರ್ಡಿನರ್ ನಗರದಿಂದ ರೂಸ್‌ವೆಲ್ಟ್ (Roosevelt Arch) ಆರ್ಚ್‌ಮೂಲಕ ಬರುತ್ತಾರೆ.

## ಇತಿಹಾಸ :

ಎರಡು ದಶಲಕ್ಷ ವರ್ಷಗಳಿಂದೀಚೆಗೆ ಮೂರು ನಾಲ್ಕು ಬಾರಿ ಜ್ವಾಲಾಮುಖಿಯಿಂದ ಭಾರಿ ಸ್ಫೋಟಗಳಾದುವೆಂದು ಹೇಳಲಾಗಿದೆ. ೬,೪೦,೦೦೦ ವರ್ಷಗಳ ಹಿಂದಿನ ಸ್ಫೋಟದಿಂದ ೨೦೦ ಮೈಲಿಗಳಷ್ಟು ಭಗ್ನಾವ ಶೇಷವನ್ನು ಹೊರಚಿಮ್ಮಲಾಯಿತು. ಈ ವನದ ಮಧ್ಯ ಭಾಗದಲ್ಲಿ ೩೦*೪೦ ಮೈಲಿಗಳಷ್ಟು ವಿಸ್ತಾರ ಕುಸಿದು ಒಂದು ಜ್ವಾಲಾಮುಖಿಯ ಬೇಸಿನ್ ಅಥವ ತಗ್ಗಿನಬಯಲು (Caldera or basin) ಉಂಟಾಯಿತು. ಈ ಜ್ವಾಲಾಮುಖಿಯ ಸ್ಫೋಟದಿಂದ ಬಿಸಿನೀರಿನ ಚಿಲುಮೆಗಳು, ಬುಗ್ಗೆಗಳು (Springs), ಕುದಿಯುವ ಮಣ್ಣಿನ ಹೊಂಡಗಳು (Boiling Mud pots) ಮತ್ತು ಹೊಗೆಯ ಉಗುಳವಿಕೆ (Fumeroles) ಇಂದಿಗೂ ಜೀವಂತವಾಗಿದ್ದು ಲಕ್ಷಾಂತರ ಪ್ರವಾಸಿಗಳನ್ನು ಆಕರ್ಷಿಸುತ್ತದೆ. ಇಲ್ಲಿನ ಯೆಲ್ಲೊ ಸ್ಟೋನ್ ನದಿಯ ಕ್ಯಾನ್ಯನ್ ನೋಡಿದಾಗ ಜ್ವಾಲಾಮುಖಿಯ ಶಕ್ತಿಯ ಬಾಹುಳ್ಯದ ಜೊತೆಗೆ ಭೂಗರ್ಭದ ರಚನೆಯ ಅನಾವರಣದ ಸೊಬಗನ್ನೂ ಸವಿಯ ಬಹುದು. ಭೂಗರ್ಭದಲ್ಲಿನ ಶಿಲಾರಸವು(Magma) ಇದಕ್ಕೆ ಕಾರಣವಾಗಿದೆ. ಭೂಮಿಯ ಮೇಲೆ ಬಿದ್ದ ನೀರು ಇಳಿದು ಭೂಗರ್ಭದಲ್ಲಿನ ಶಿಲಾರಸದ ಶಾಖ ಮತ್ತು ಒತ್ತಡ ಜಾಸ್ತಿಯಾಗಿ ಪುನಃ ಭೂಮೇಲ್ಭಾಗಕ್ಕೆ ಅನೇಕ ರೂಪಗಳಲ್ಲಿ ಚಿಮ್ಮಲ್ಪಡುತ್ತದೆ ಅಥವಾ ಹೊರಬರುತ್ತದೆ.

## ಮಮ್ಮೊಕ್ ಬಿಸಿನೀರಿನ ಬುಗ್ಗೆ (Hot Springs) :

ಇದು ರೂಸ್‌ವೆಲ್ಟ್ ಆರ್ಚ ನಿಂದ ಪ್ರವೇಶವಾದ ಕೂಡಲೆ ಜಗಲಿಗಳ ರೂಪದಲ್ಲಿ ಕಾಣುವ ರಮ್ಯ ಮನೋಹರ ಬಿಸಿನೀರಿನ ಬುಗ್ಗೆ, ಭೂಗರ್ಭದ ಒತ್ತಡದಲ್ಲಿ ಹೆಚ್ಚಿನ ಶಾಖದಿಂದ ನೀರು ಭೂಮಿಯ ಮೇಲ್ಭಾಗಕ್ಕೆ ಹರಿದು ಬಂದು ತಣ್ಣಗಾಗಿ ಹೊಂಡಗಳಲ್ಲಿ ಸೇರುತ್ತದೆ. ಬಿಸಿಯಾದ ನೀರಿನಲ್ಲಿ ಖನಿಜಗಳು ಸೇರಿ, ಉದಾಹರಣಗೆ ಮಮ್ಮಾತೆ ಬುಗ್ಗೆಯಲ್ಲಿ ಸುಣ್ಣದ ಕಲ್ಲಿನ ಮೂಲಕ ಮೇಲೇರುವಾಗ (Lime stone)

* ನಿವೃತ್ತ ಮುಖ್ಯ ಇಂಜಿನಿಯರ್, ನಂ. ೧೧೫, ೧೧ನೇ ಮುಖ್ಯರಸ್ತೆ, ಪಶ್ಚಿಮ ಕಾರ್ಡ್‌ರಸ್ತೆ, ೨ನೇ ಹಂತ, ಬೆಂಗಳೂರು-೫೬೦ ೦೮೬



ಬೆಲ್ಲಿಯಂ ಪೊಲ್



ಯೆಲ್ಲೊಸ್ಟೋನ್ ಪಾರ್ಕ್

ಕ್ಯಾಲ್ಸಿಯಂ ಕಾರ್ಬೋನೇಟ್ ಸೇರುತ್ತಾ ಬಂದು, ವಿಶಿಷ್ಟವಾದ ಜಗಲಿಯ ರೂಪವಾಗಿ ಮಾರ್ಪಡುತ್ತ, ಬಿಸಿನೀರು ಬೀಳುವ ದೃಶ್ಯ ಚೇತೋಹಾರಿ.

**ನಾರಿಸ್‌ಗೀಸರ್ ಬೇಸಿನ್, ಅಪ್ಪರ್, ಮಿಡ್‌ವೇ ಮತ್ತು ಲೋಯರ್ ಗೀಸರ್ ಬೇಸಿನ್ ಸ್ಟೀಮ್ ಬೋಟ್ ಚಿಲುಮೆ :**

ಮಮ್ಮತ್ ಚಿಲುಮೆಯಿಂದ ನಾರಿಸ್ ಚಿಲುಮೆಯ ೨೧ ಮೈಲಿ ದೂರದಲ್ಲಿದೆ ಅಪ್ಪರ್, ಮಿಡ್‌ವೇ ಮತ್ತು ಲೋಯರ್ ಗೀಸರ್ ಬೇಸಿನ್‌ನ ಚಿಲುಮೆಗಳು ಮ್ಯಾಡಿಸನ್ ಜಂಕ್ಷನ್ ಮತ್ತು ಓಲ್ಡ್ ಫೈಥ್‌ಫುಲ್ ಚಿಲುಮೆಯ ಮಧ್ಯದಲ್ಲಿವೆ. ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಚಿಲುಮೆಗಳನ್ನು ನೋಡಬಹುದು. ನಾರಿಸ್ ಬೇಸಿನ್‌ನಲ್ಲಿ ಅತ್ತಿ ಎತ್ತರದ ಸ್ಟೀಮ್ ಬೋಟ್ ಚಿಲುಮೆಯಿದೆ. ೩೦೦-೪೦೦ ಎತ್ತರಕ್ಕೆ ನೀರು ಚಿಮ್ಮುತ್ತದೆ. ಸುಮಾರು ೧೨ ಗಂಟೆವರೆಗೆ ವಿವಿಧ ಎತ್ತರದಲ್ಲಿ ಚಿಮುತ್ತದೆ.

**ಲಯನ್ ಬುಗ್ಗೆ :**

ಒಂದರಿಂದ ಏಳು ನಿಮಿಷದವರೆಗೆ ಇರುತ್ತದೆ. ನಂತರ ದಟ್ಟ ಹೊಗೆ ಮತ್ತು ಶಬ್ಧಮಾಡುತ್ತದೆ. ಅದಕ್ಕಾಗಿ ಇದನ್ನು ಲಯನ್ ಬುಗ್ಗೆ ಎಂದು ಕರೆಯುತ್ತರೆ.

**ಕ್ಯಾಸಲ್ ಗೀಸರ್ :**

ಇದು ಅಪ್ಪರ್ ಗೀಸರ್ ವಲಯದಲ್ಲಿದೆ. ಪ್ರತಿ ೯ ಗಂಟೆಯಿಂದ ೧೨ ಗಂಟೆಗೊಮ್ಮೆ ಬಿಸಿನೀರನ್ನು ೨೦ ನಿಮಿಷಗಳ ಕಾಲ ಹೊರ ಚಿಮ್ಮುತ್ತದೆ. ಇದು ಶಂಖಾಕಾರ (Cone) ದ ಬಾಯಿಹೊಂದಿದ್ದು ೭೫ ರಿಂದ ೯೦ ಅಡಿ ಎತ್ತರಕ್ಕೆ ನೀರು ಚಿಮ್ಮುತ್ತದೆ ೪೦ ನಿಮಿಷಗಳವರೆಗೆ ಹೊಗೆಯನ್ನು ಉಗುಳುತ್ತದೆ

**ಕ್ರೆಸ್ಟೆಡ್ ಪೂಲ್ :**

ಇದೇ ವಲಯದಲ್ಲಿ ಈ ಬಿಸಿನೀರಿನ ಹೊಂಡವು ಹೊಗೆ ಕಾರುತ್ತದೆ. ಇದು ೪೨ ಅಡಿ ಆಳವಾಗಿದ್ದು ಜೋರಾಗಿ ಕುದಿಯುತ್ತಿರುತ್ತದೆ. ಇದರ ತುಡಿತದಿಂದ ಬಿಸಿನೀರನ್ನು ಹತ್ತು ಅಡಿವರೆಗೆ ಚಿಮ್ಮುತ್ತದೆ. ಬಿಸಿಲಲ್ಲಿ ಪ್ರಕಾಶದಿಂದ ಬೆಳಗುತ್ತ ನೋಡಲು ರಮಣೀಯವಾಗಿದೆ.

**ಗ್ರ್ಯಾಂಡ್ ಗೀಸರ್ :**

ಇದು ಕೂಡ ಪ್ರಪಂಚದ ಅತಿ ಎತ್ತರದ ಒಂದು ಚಿಲುಮೆ. ಪ್ರತಿ ೭ ಗಂಟೆಯಿಂದ ೧೫ಗಂಟೆಗಳ ಅಂತರದಲ್ಲಿ ಚಿಮ್ಮುತ್ತದೆ. ನೀರಿನ ಹೊಂಡದಿಂದ ಶಕ್ತಿಯುತವಾಗಿ ರಭಸದಿಂದ ಮೇಲೇರುತ್ತದೆ.



ಮಮ್ಮೊಕ್ ಬಿಸಿನೀರಿನ ಬುಗ್ಗೆ



ಯೆಲ್ಲೊಸ್ಟೋನ್ ಪಾರ್ಕ್







ಮೂರ್ನಿಂಗ್ ಗ್ಲೋರಿ ಹೊಂಡ

**ಗ್ರೋಟೊ ಗೀಸರ್ :**

ಪ್ರತಿ ೮ ಗಂಟೆಗೊಮ್ಮೆ ೧೦ ಅಡಿ ಎತ್ತರಕ್ಕೆ ೧೧/೨ ಗಂಟೆಯಿಂದ ಹತ್ತು ಗಂಟೆವರೆಗೆ ಜೀವಂತವಾಗಿರುತ್ತದೆ. ಶಂಖದಾಕಾರದಲ್ಲಿದೆ.

**ಎವರ್ ಸೈಡ್ ಗೀಸರ್ :**

ಇದು ಫೈರ್ ಹೋಲ್ ನದಿ ತೀರದಲ್ಲಿದ್ದು ೨೦೧೦ ಶಾಖದಿಂದ ಮೇಲೇರುತ್ತದೆ. ಪ್ರತಿ ೭ಗಂಟೆಗಳ ಅಂತರದಲ್ಲಿ ೭೫ ಅಡಿ ಎತ್ತರಕ್ಕೆ ಚಿಮ್ಮುತ್ತಾ ೨೦ನಿಮಿಷಗಳವರೆಗೆ ಇರುತ್ತದೆ.

**ಮೂರ್ನಿಂಗ್ ಗ್ಲೋರಿ ಹೊಂಡ :**

ಇದರ ಚಟುವಟಿಕೆ ಈಗ ಮೊದಲಿನಂತಿಲ್ಲ. ನೀರಿನ ಶಾಖವು ಕಡಿಮೆಯಾಗಿದೆ.

**ಗ್ರಂಡ್ ಪ್ರಿಸ್ಮ್‌ಟಿಕ್ ಸ್ಪ್ರಿಂಗ್ :**

ಇದು ಮಿಡ್‌ವೇ ಬೇಸಿನ್‌ನಲ್ಲಿದೆ. ಇಲ್ಲಿನ ಅತಿದೊಡ್ಡ ದಾಗಿದ್ದು ಸುಮಾರು ೩೭೦ ಅಡಿ ವ್ಯಾಸವಿದ್ದು ೧೨೫ ಅಡಿ ಆಳವಾಗಿದೆ.

**ಓಲ್ಡ್ ಫೈತ್ ಗೀಸರ್ :**

ಇದು ಪ್ರವಾಸಿಗರಿಗೆ ಅತ್ಯಂತ ಪ್ರಿಯವಾದ ಬಿಸಿನೀರಿನ ಚಿಲುಮೆ. ಸಾವಿರಾರು ಗ್ಯಾಲನ್ ಹೊಗೆಕಾರುವ ಬಿಸಿನೀರು ಆಕಾಶಕ್ಕೆ ರಭಸದಿಂದ ಘರ್ಜಿಸುತ್ತ ಹಾರುತ್ತದೆ. ಪ್ರತಿ ೫೧ ರಿಂದ ೧೨೦ ನಿಮಿಷಗಳ ಅಂತರದಲ್ಲಿ ೧೦೬ ಅಡಿಗಳಿಂದ ೧೮೦ ಅಡಿಗಳ ಎತ್ತರಕ್ಕೆ ಚಿಮ್ಮುತ್ತದೆ. ಚಿಮ್ಮುವ ಮೊದಲಿನ ಶಾಖ ೨೪೦೦. ಪ್ರತಿ ಚಿಮ್ಮುವಿಕೆಯಲ್ಲಿ ೩೭೦೦ ರಿಂದ ೮೪೦೦ ಗ್ಯಾಲನ್ ನೀರು ಹೊರಹೋಗುತ್ತದೆ. ಇದನ್ನು ವೀಕ್ಷಿಸಲು ಸಾವಿರಾರು ಜನ ಬಂದು ಇಲ್ಲಿ ಸೇರುತ್ತಾರೆ. ಈ ಅಪರೂಪದ ಚಟುವಟಿಕೆಯನ್ನು ನೆರೆದಿರುವ ಪ್ರೇಕ್ಷಕರು ಹರ್ಷೋದ್ಗಾರ ದೊಡನೆ ಪ್ರತಿ ಚಿಮ್ಮುವಿಕೆಯನ್ನು ಸ್ವಾಗತಿಸುತ್ತಾರೆ.

**ಮಣ್ಣಿನ ಬಿಸಿ ಹೊಂಡಗಳು :**

ಮ್ಯೂಡಿಸನ್ ಜಂಕ್ಷನ್ ಮತ್ತು ಓಲ್ಡ್ ಫೈತ್ ಫಲ್ ಬುಗ್ಗೆಯ ಮಧ್ಯೆ ಅನೇಕ ಮಣ್ಣಿನ ಕುದಿಯುವ ಬಿಸಿ ಹೊಂಡಗಳಿವೆ. ಇವು ನೀರ್ಗುಳ್ಳೆಗಳಿಂದ ಕೂಡಿರುತ್ತವೆ

**ಬೆಲ್ಲಿಯಂ ಪೊಲ್ :**

ಇದು ಅಪ್ಪರ್ ಗೀಸರ್ ಬೇಸಿನ್ ನೆಲದಲಿದೆ. ಬೆಲ್ಜಿಯಂ ಪ್ರವಾಸಿಗನೊಬ್ಬ ಇದಕ್ಕೆ ಬಿದ್ದು ಮಾರಣಾಂತಕವಾಗಿ ಗಾಯ ಗೊಂಡಿದ್ದರಿಂದ ಈ ಹೆಸರು ಬಂದಿದೆ. ಇದರ ಬಿಸಿನೀರು ೧೬೦೦ ಶಾಖ ಹೊಂದಿರುತ್ತದೆ.

**ಹೊಗೆಯಂಗುಳು ವಕಂಡಿಗಳು/ ತೂತುಗಳು (Fumeroles) :**

ಈ ರಾಷ್ಟ್ರೀಯ ವನದ ಹೆಚ್ಚಿನ ಪ್ರದೇಶದಲ್ಲಿ ಹೊಗೆಯುಗುಳುವ ಕಂಡಿಗಳು, ಬಿರುಕುಗಳು ಮತ್ತು ತೂತುಗಳನ್ನು ನೋಡಬಹುದು. ಅತಿ ಬಿಸಿನೀರು ಆವಿಯರೂಪದಲ್ಲಿ ಇತರ ಅನಿಲಗಳೊಡನೆ ಸೇರಿ ಹೊಗೆಯಾಗಿ ಹೊರ ಬರುವ ದೃಶ್ಯ ಸಾಮಾನ್ಯ. ಕೆಲವು ಸಾರಿ ಹೊಗೆಯು ರಭಸದಿಂದ ಶಬ್ದ ಮಾಡುತ್ತ ಹೊರಬರುತ್ತದೆ. ಇವುಗಳನ್ನು ಫ್ಯಾಮರೋಲ್ಸ್ ಎಂದು ಕರೆಯುತ್ತಾರೆ.

**ಯೆಲ್ಲೊ ಸ್ಟೋನ್ ಗ್ರ್ಯಾಂಡ್ ಕ್ಯಾನಿಯನ್ :**

ಯೆಲ್ಲೊ ಸ್ಟೋನ್ ನದಿಯು ಅಬ್ಸರೋಕ ಪರ್ವತದಲ್ಲಿ ಹುಟ್ಟಿ ೨೦ ಮೈಲಿಗಳಷ್ಟು ದೊಡ್ಡ ಕೊಳ್ಳವನ್ನು (Canyon) ಸಾವಿರಾರು ವರ್ಷಗಳಿಂದ ಹರಿಯುತ್ತಾ ರಚನೆಮಾಡಲು ಕಾರಣವಾಗಿರುತ್ತದೆ. ಇಲ್ಲಿ ಭೂಗರ್ಭದ ಅದ್ಬುತ ರಚನೆಯ ಭವ್ಯತೆಯನ್ನು, ಸೊಬಗನ್ನು ಅನಾವರಣಗೊಳಿಸಿದೆ. ಕೆಲವೆಡೆ ೪೦೦೦ ಅಡಿ ಅಗಲವಿದ್ದು ೧೨೦೦ ಅಡಿಗಳಷ್ಟು ಆಳವಿದೆ. ಇಲ್ಲಿ ಎರಡು ಜಲಪಾತಗಳು ಪ್ರಕೃತಿಯ ಸೌಂದರ್ಯವನ್ನು ಇಮ್ಮಡಿಗೊಳಿಸಿವೆ. ಮೇಲಿನ ಜಲಪಾತ ೧೦೯ ಅಡಿಗಳು ಮತ್ತು ಕೆಳಗಿನ ಜಲಪಾತ ೩೦೮ ಅಡಿಗಳ ಎತ್ತರದಿಂದ ಧುಮುಕ್ಕುವ ದೃಶ್ಯವು ರಮ್ಯ ಮನೋಹರವಾಗಿದೆ. ಈ ನಿಸರ್ಗದ ಚೆಲುವು ನೋಡಿದಾಗ ಮನಸ್ಸಿಗಾಗುವ ಆನಂದ ವರ್ಣಿಸಲಸದಳ. ಪವಿತ್ರ ಭಾವನೆಯ ಜೊತೆಗೆ ಸಾರ್ಥಕತೆಯ ಭಾವಮೂಡುತ್ತದೆ. ಈ ಜಾಗವನ್ನು ಸ್ಫೂರ್ತಿನೀಡುವ "ಆರ್ಟಿಸ್ಟ್ ಪಾಯಿಂಟ್" ಎಂದು ಕರೆಯುತ್ತಾರೆ.


ಯೆಲ್ಲೊ ಸ್ಟೋನ್ ಸರೋವರ

**ಐವರ್ ಫಾಲ್ಸ್ :**

ಕ್ಯಾನ್ಯನ್ ಮತ್ತು ಟವರ್ ಜಂಕ್ಷನ್ ಮಧ್ಯೆ ಟವರ್ ಕ್ರೀಕ್‌ನಿಂದ ಹರಿದು ಬಂದು ೧೩೨ ಅಡಿಗಳ ಎತ್ತರದಿಂದ ಧುಮುಕಿ ಈ ಉಪನದಿ ಯೆಲ್ಲೊ ಸ್ಟೋನ್ ನದಿಯನ್ನು ಸೇರುತ್ತದೆ.

**ಯೆಲ್ಲೊ ಸ್ಟೋನ್ ಸರೋವರ :**

ಇದು ಉತ್ತರ ಅಮೆರಿಕದ ಅತಿ ಎತ್ತರದ ಸರೋವರ. ೧೩೨ ಚ.ಮೈ ವಿಸ್ತಾರ ಹೊಂದಿದೆ. ಸ್ವಲ್ಪ ಭಾಗ ಜ್ವಾಲಾಮುಖಿಯಿಂದಾದ ಕಾಲ್ಡೆರಾದಲ್ಲಿದೆ. ಸರೋವರದ ಸ್ವಲ್ಪ ಭಾಗವು ಬಿಸಿ ನೀರಿನ ಬುಗ್ಗೆಗಳನ್ನು ಹೊಂದಿದೆ.

**ಲಾಮರ್ ಮತ್ತು ಹೇಡನ್ ಕಣಿವೆ :**

ಈ ರಾಷ್ಟ್ರೀಯ ವನದಲ್ಲಿ ಕಾಡುಮರಗಳು, ಬೆಟ್ಟ ಗುಡ್ಡಗಳು ಮತ್ತು ಅನೇಕ ಕಾಡು ಪ್ರಾಣಿಗಳಿರುವ ವಿಶಾಲ ಪ್ರದೇಶ. ಯೆಲ್ಲೊ ಸ್ಟೋನ್ ನದಿಯು ಇಲ್ಲಿ ಹರಿಯುತ್ತಿದ್ದು ಅನೇಕ ಪಕ್ಷಿ ಸಂಕುಲ, ಮತ್ತು ಅಪರೂಪದ ಪ್ರಣಿಗಳಾದ ಗ್ರಿಸ್ಲಿ ಬೇರ್ಸ್ (ಕಂದುಕರಡಿ) ಕಾಡು ಕೋಣ, ಎಲ್ಕ್ ಮೂಸಸ್ (ಜಿಂಕೆ ಜಾತಿಗೆ ಸೇರಿದ ಪ್ರಾಣಿ), ದೊಡ್ಡ ಕೊಂಬಿನಕುರಿ (Bighorn Sheep), ಟೊಯೊಟೆ (ಕೋಳಿಜಾತಿ), ಮೂಲ್ ಡೀರ್, ಪ್ರಾಂಗ್ ಹಾರನ್ ಆಚಿಟಿಲೋಪ್‌ಗಳನ್ನು ನೋಡಬಹುದು.

ಯೆಲ್ಲೊ ಸ್ಟೋನ್ ರಾಷ್ಟ್ರೀಯ ವನವು ಭೂಗರ್ಭದ ಚಟುವಟಿಕೆಯ ಅದ್ಭುತ ತಾಣ. ಇದೊಂದು ನಿಸರ್ಗದ ಸುಂದರ ಸೊಬಗಿನ ಲೋಕ. ಇಂತಹ ಪ್ರಕೃತಿಯ ಸೌಂದರ್ಯ ಆತ್ಮ ಸಂತೋಷ ನೀಡುವುದರ ಜೊತೆಗೆ ಬದುಕಿನ ಸಾರ್ಥಕತೆಯ ಸಂದೇಶ ನೀಡುವ ಸೃಷ್ಟಿಯ ಚಮತ್ಕಾರದ ಪ್ರತೀಕ. ಭುವನದ ಇಂತಹ ವಿಚಿತ್ರಗಳನ್ನು ನೋಡುವ ಅವಕಾಶ ಪ್ರಕೃತಿಯನ್ನು ಆರಾಧಿಸುವ ಎಲ್ಲರ ಬದುಕಿನಲ್ಲಿ ಬರಲೆಂದು ನಮ್ಮ ಆಶಯ.



# ಭಕ್ತಿಸ್ತುತಿ

ಚಿತ್ತೈಸಿ ಸೇರಿಪುದು ನೂರ್ಹತ್ತು ವರ್ಷಕ್ಕೆ
ಹತ್ತಾರು ವರ್ಷಗಳ ಮತ್ತೆ ಸದ್ದುರುವೆ,
ತವ ಮಾತು ಮನ ಮಾಟಗಳು ಚೆನ್ನ; ಜನಮನಕ್ಕೆ;
ತವಕಾಯ ಸಾನ್ನಿಧ್ಯ ಚೆನ್ನ ಕಣ್ಮನಕೆ.

ಭವವನಳಿಸುವ ದಿವ್ಯ ಸಂಜೀವನ,
ಶಿವಯೋಗಿಯೊಡನಾಡೆ ಜನ್ಮಗಳು ಪಾವನ,
ಧನ್ಯರಾದೆವು ನೋಡಿ ಒಡನಾಡಿ ಮಾತಾಡಿ,
ಧನ್ಯವಾದವು ಆತ್ಮ ಕರ್ಮಗಳ ಬಿಸುಡಿ.

ಕರ್ತನಾಜ್ಞೆಯ ಸಾರ್ಥಕಗೊಳಿಸುತಿರುವ
ಮರ್ತ್ಯದ ಮಹಾರುದ್ರ ಶಿವಕುಮಾರೇಶನಂ
ಕರ್ತಬೀಳ್ಕೊಟ್ಟಿರುವ ಕೈಲಾಸಪುರದಿಂದ
ಮರ್ತ್ಯದ ಮಹಾಮನೆಯು ಕೆಡಬಾರದೆಂದು.

ನೋಡುತಿರೆ ತವದಿವ್ಯಲಿಂಗ ಪೂಜಾ ವಿಧಾನ
ನೋಡಿದಣಿಯವು ನಯನ
ಚದುರಲೊಲ್ಲದುಗಮನ,
ಇನ್ನೇನು ಬರೆಯಲಿ ಶಬ್ದದರಿದ್ರನಾಂ;
ಚೆನ್ನಪ್ರಭುಲಿಂಗಯ್ಯ ಶಬ್ದಕ್ಕತೀತನೀಂ ॥ ೧೬ ॥

**ಸಿ.ಎಂ. ಚನ್ನಬಸವಯ್ಯ**
C/o ಡಾ॥ ಎಂ.ಸಿ. ಶಿವಪ್ರಕಾಶ್
ಪ್ರೊಫೆಸರ್ (ಫಿಜಿಕ್ಸ್)
ಚನ್ನಬಸವೇಶ್ವರ ಇನ್ಸಿಟ್ಯೂಟ್ ಆಫ್ ಟೆಕ್ನಾಲಜಿ (CIT)
ಗುಬ್ಬಿ-೫೭೨೨೧೬. ತುಮಕೂರು ಜಿಲ್ಲೆ





# ಮಹಾನ್ ಸಂತ ಗುರು ಬಸವಣ್ಣನವರು

– ಯೋಗೀಶ್ ನಿರ್ವಿಕಲ್ಪ *

**ಹು**ಟ್ಟು ಮತ್ತು ಸಾವುಗಳ ನಡುವಿನ ನಮ್ಮ ಬದುಕು ಅತ್ಯಂತ ಅಮೂಲ್ಯವಾದದ್ದು. ಅಮೂಲ್ಯವಾದ ಬದುಕಿನ ಲೋಕ ವ್ಯವಹಾರದಲ್ಲಿ ನಾವು ಹೇಗೆ ವ್ಯವಹರಿಸಬೇಕು ? ಬದುಕಿನಲ್ಲಿ ನಾವು ಕಾಣಬೇಕಾದ ಪರಮ ಸತ್ಯದ ಕಡೆಗೆ ಮನಸ್ಸನ್ನು ಹೇಗೆ ಕೇಂದ್ರೀಕರಿಸಬೇಕೆಂಬ ಬದುಕಿನ ಸಾರ್ಥಕತೆಯ ಪೂರ್ಣ ಪಾಠವನ್ನು ಲೋಕಕ್ಕೆ ಉಪದೇಶಿಸಿದವರು ದಾರ್ಶನಿಕ ಶ್ರೇಷ್ಠರಾದ ಗುರು ಬಸವಣ್ಣನವರು.



ನಮ್ಮ ಹುಟ್ಟಿನ ಹಿಂದಿನ ಸ್ಥಿತಿಗೆ ಕಾರಣವೇನು ? ನಮ್ಮ ಸಾವಿನ ನಂತರದ ಮುಂದಿನ ಗತಿಯೇನು ? ಹುಟ್ಟು ಮತ್ತು ಸಾವುಗಳ ನಡುವಿನ ಬದುಕಿನ ಅರ್ಥವೇನು ? ಎಂಬಂತಹ ನೂರಾರು ಪ್ರಶ್ನೆಗಳು ಒಮ್ಮೆಯಾದರೂ ನಮ್ಮ ಮನಸ್ಸನ್ನು ಕಾಡದೇ ಇರಲು ಸಾಧ್ಯವಿಲ್ಲ. ಹುಟ್ಟು ಮತ್ತು ಸಾವುಗಳ ನಡುವಿನ ನಮ್ಮ ಬದುಕು ಅಮೂಲ್ಯವಾಗಿದ್ದರೂ ಸಹ ನಾವಿಂದು ವಿಷಯಾದಿ ಪ್ರಪಂಚದ ಅನಗತ್ಯ ಕಾರ್ಯಚಟುವಟಿಕೆಗಳಲ್ಲಿಯೇ ಕಾಲ ಕಳೆಯುತ್ತಿದ್ದೇವೆ. ಬದುಕಿನಲ್ಲಿ ಕಾಣಬೇಕಾದ ಪರಮ ಸತ್ಯವನ್ನು ಮರೆತು ಅಜ್ಞಾನದ ಹಾದಿಯಲ್ಲಿ ಬದುಕಿನ ಬಂಡಿಯನ್ನು ಸಾಗಿಸಿಕೊಂಡು ಬಂದಿದ್ದೇವೆ. ಪರಮ ಸತ್ಯವಾದ ಪರಮಾತ್ಮ ತತ್ತ್ವವನ್ನು ಅರಿಯದ ಕಾರಣ ಮನಸ್ಸು ಸದಾ ಚಿಂತೆಯ ಪರಿತಾಪವನ್ನು ಅನುಭವಿಸುತ್ತಿರುವುದು ನಮ್ಮೆಲ್ಲರಿಗೂ ಸಹ ಅನುಭವ ವೇದ್ಯವಾದ ಸಂಗತಿಯೇ ಆಗಿದೆ. ಲೋಕ ವ್ಯವಹಾರದ ಸಂತೆಯಲ್ಲಿರುವ ವಿಷಯ ವಸ್ತುವಿನೊಳಗಿನ ಆತ್ಯಂತಿಕ ಆಸಕ್ತಿಯ ಪರಿಣಾಮ ಮನಸ್ಸು ಸಂಕುಚಿತಗೊಳ್ಳುವುದರ ಮೂಲಕ ವಿಕಾಸದ ನಿಜನೆಲೆಯನ್ನು ಕಾಣಲು ಅದಕ್ಕೆ ಸಾಧ್ಯವಾಗುತ್ತಿಲ್ಲ. ಯಾವ ಕ್ಷಣದಲ್ಲಿ ನಮ್ಮ ಮನಸ್ಸು ಯಾವ ವಿಷಯ ವಸ್ತುಗಳ ಮೋಹದ ಪಾಶಕ್ಕೆ ಒಳಗಾಗುತ್ತದೆ ಎಂಬುದು ಸ್ವತಃ ನಮ್ಮ ಮನಸ್ಸಿಗೆ ತಿಳಿದಿರುವುದಿಲ್ಲ.

ಬದುಕಿನ ಪ್ರತಿಯೊಂದು ಸಂದಿಗ್ಧತೆಯ ಎಲ್ಲಾ ತಲ್ಲಣಗಳನ್ನು ಬಲ್ಲವರಾಗಿದ್ದ ಗುರು ಬಸವಣ್ಣನವರು ಹುಟ್ಟು-ಸಾವುಗಳ ನಡುವಿನ ಅಮೂಲ್ಯವಾದ ಇಹಲೋಕದ ಅರ್ಥಪೂರ್ಣ ಬದುಕಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದರು. ಹಿಂದಣ ಅಥವಾ ಮುಂದಣ ಜನ್ಮ ಯಾವುದಾದರೂ ಆಗಿರಲಿ ಅದರ ಕುರಿತು ಚಿಂತಾಕ್ರಾಂತರಾಗದೇ ಪ್ರಸ್ತುತ ಬದುಕಿನಲ್ಲಿ ನಾವು ಮಾಡಬೇಕಾದ ಕರ್ತವ್ಯವನ್ನು ಸಮರ್ಥವಾಗಿ ನಿರ್ವಹಿಸಲು ಅವರು ತಿಳಿಸಿದರು. ಅವರ ಈ ಸಂದೇಶದ ವಿಚಾರಧಾರೆ ಕಾಯಕ ಯೋಗ ಎನಿಸಿಕೊಂಡು ಜಗತ್ತಿಗೆ ಆದರ್ಶನೀಯ ಎನಿಸಿರುವುದನ್ನು ನಾವು ಕಾಣಬಹುದು.

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ. ಮೊ: ೯೯೦೦೬ ೦೧೬೯೭

ಮನಸ್ಸಿನ ಅತಿಯಾದ ಕಾಮಾದಿ ಬಯಕೆಗಳನ್ನು ಉದಾತ್ತೀಕರಿಸಿಕೊಳ್ಳುವ ಮತ್ತು ಪರಮಸತ್ಯ ತತ್ತ್ವದತ್ತ ನಮ್ಮ ಮನಸ್ಸನ್ನು ಕೇಂದ್ರೀಕರಿಸುವ ಸರಳ ಮತ್ತು ಸಹಜ ಮಾರ್ಗವನ್ನು ಅವರು ಇಷ್ಟಲಿಂಗ ಯೋಗ ಸೂತ್ರದ ಮೂಲಕ ಜಗತ್ತಿಗೇ ಅರಿವು ಮಾಡಿಕೊಟ್ಟ ಕೀರ್ತಿ ಪಡೆದಿದ್ದಾರೆ.

**ಮಾಡುವಂತಿರಬೇಕು, ಮಾಡದಂತಿರಬೇಕು,**
**ಮಾಡುವ ಮಠದೊಳಗೆ ತಾನಿಲ್ಲದಂತಿರಬೇಕು,**
**ನೋಡುವಂತಿರಬೇಕು, ನೋಡದಂತಿರಬೇಕು,**
**ನೋಡುವ ನೋಟದೊಳಗೆ ತಾನಿಲ್ಲದಂತಿರಬೇಕು,**
**ಕೂಡಲಸಂಗನನ ನೆನೆವುತ್ತ ನೆನೆವುತ್ತ**
**ನೆನೆಯದಂತಿರಬೇಕು.**

ನಿಸ್ವಾರ್ಥ ಬುದ್ಧಿಯಿಂದ ಮಾಡುವ ಪ್ರತಿಯೊಂದು ಕೆಲಸ ಕಾರ್ಯಗಳೂ ಸಹ ಭಗವಂತನ ಪೂಜೆ ಇದ್ದಂತೆ ಎಂದು ಅರ್ಥೈಸುವ ಗುರು ಬಸವಣ್ಣನವರು ನಾ ಮಾಡಿದೆ, ನನ್ನಿಂದಲೇ ಎಲ್ಲಾ ! ಎಂಬಂತಹ ಅಹಂಭಾವ (ಕರ್ತೃತ್ವ ಭಾವ) ನಮ್ಮಲ್ಲಿ ಇರಬಾರದೆಂದು ತಿಳಿಸುತ್ತಾರೆ. ಯಾವಾಗ ನಾನೆಂಬ ಅಹಂಭಾವ ನಮ್ಮಲ್ಲಿ ಅಂಕುರಿಸುತ್ತದೆಯೇ ಆ ಕ್ಷಣದಿಂದಲೇ ನಮ್ಮ ವಿನಾಶ ಪ್ರಾರಂಭವಾಗುತ್ತದೆ ಎನ್ನುತ್ತಾರೆ. ಲೋಕ ವ್ಯವಹಾರದೊಳಗಿನ ಯಾವುದೇ ವಿಷಮ ಪರಿಸ್ಥಿತಿಯಲ್ಲಿಯೂ ಅವರೆಂದೂ ತಮ್ಮ ಮನಃಶಾಂತಿಯನ್ನು ಕಳೆದುಕೊಂಡವರಲ್ಲ. ಸಾಕ್ಷೀ ಪ್ರಜ್ಞೆಯ ಭಾವದಲ್ಲಿಟ್ಟುಕೊಂಡು ಬದುಕಿನ ಪ್ರತಿಯೊಂದು ಕಾರ್ಯವನ್ನೂ ಒಂದು ಯೋಗದಂತೆ ಅಂದರೆ ಪರಿಣಾಮ ರಹಿತ ಹಾಗೂ ಆನಂದ ಸಹಿತವಾಗಿ ನಿರ್ವಹಿಸಿದ್ದು ಅವರೊಳಗಿನ ಅಪರಿಮಿತ ಲಿಂಗಾನುಭಾವಕ್ಕೊಂದು ಸಾಕ್ಷಿಯಾಗಿದೆ.

ಗುರು ಬಸವಣ್ಣನವರ ದೃಷ್ಟಿಯಲ್ಲಿ ಸನ್ಯಾಸ ಎಂದರೆ ಸಾಂಸಾರಿಕ ಬದುಕಿನ ಪಲಾಯನವಾದವಾಗಿರಲಿಲ್ಲ ! ಮನಸ್ಸಿನಲ್ಲಿ ಪರಮಾತ್ಮ ತತ್ತ್ವದೊಡನೆ ಒಂದು ಅವಿನಾಭಾವ ಸಂಬಂಧವನ್ನಿಟ್ಟುಕೊಂಡು ನಾವು ನಮ್ಮ ಕರ್ತವ್ಯಗಳನ್ನು ನಿರ್ವಂಚನೆಯಿಂದ ನಿರ್ವಹಿಸುವುದೇ ಸನ್ಯಾಸದ ನಿಜಾರ್ಥವಾಗಿತ್ತು. ಯಾವೊಬ್ಬ ಸನ್ಯಾಸಿ ಅಥವಾ ಸಂಸಾರಿಯಾದರೂ ಸಹ ಇಹಲೋಕದ ವ್ಯವಹಾರ ತ್ಯಜಿಸಿ ಬದುಕಲು ಸಾಧ್ಯವಿಲ್ಲ. ಯಾರು ಯಾವ ರೀತಿಯಲ್ಲಿ ಲೋಕ ವ್ಯವಹಾರದಲ್ಲಿ ವ್ಯವಹಾರಿಸುತ್ತಾರೆಂಬ ಆಧಾರದ ಮೇಲೆ ಸಂಸಾರಿ ಅಥವಾ ಸನ್ಯಾಸಿ ಎನಿಸಿಕೊಳ್ಳಲು ಸಾಧ್ಯ ಎನ್ನುತ್ತಾರೆ ಗುರು ಬಸವಣ್ಣನವರು. ಅವರ ಚಿಂತನೆಯ ದೃಷ್ಟಿಯಲ್ಲಿ ವಿಷಯಾಸಕ್ತಿಯುಳ್ಳ ಮನಸ್ಸಿನ ಮೋಹ ಪರವಶತೆಯೇ ಸಂಸಾರ ಎನಿಸಿಕೊಂಡರೆ ವಿಷಯ ವಸ್ತುವಿನೊಳಗಿನ ಮನಸ್ಸಿನ ನಿರ್ಮೋಹತ್ವವು ಸನ್ಯಾಸ ಎನಿಸಿಕೊಳ್ಳುತ್ತದೆ. ಮನಸ್ಸನ್ನು ನಷ್ಟ ಮಾಡಿ, ಸದಾ ಸರ್ವದಾ ಬೆಳಗುತ್ತಿರುವ ಶುದ್ಧಾತ್ಮ ತತ್ತ್ವದಲ್ಲಿ ಸ್ಥಾಯಿಯಾಗಿ ನಿಂತವರೇ ನಿಜಾರ್ಥದಲ್ಲಿ ಸನ್ಯಾಸಿ ಅಥವಾ ಜ್ಞಾನಿ ಎನಿಸಿಕೊಳ್ಳುತ್ತಾರೆ. ಈ ವಿಚಾರ ದೃಷ್ಟಿಯಿಂದ ನೋಡುವುದಾದರೆ ಗುರು ಬಸವಣ್ಣನವರು ಪರಮಶ್ರೇಷ್ಠ ಸನ್ಯಾಸಿನಿ ಎನಿಸಿಕೊಂಡಿದ್ದರು. ಒಬ್ಬ ಆದರ್ಶ ಗೃಹಸ್ಥರಾಗಿ, ರಾಜಕೀಯ ಕ್ಷೇತ್ರದ ಶ್ರೇಷ್ಠ ರಾಜಕೀಯ ಮುತ್ಸದ್ಧಿಯಾಗಿ, ಸಮಾಜ ಸುಧಾರಣೆ ಕಾರ್ಯದ ಶ್ರೇಷ್ಠ ಸಮಾಜ ಸುಧಾರಕರಾಗಿ, ವಿಶ್ವ ಭ್ರಾತೃತ್ವದ ಧಾರ್ಮಿಕ ತತ್ತ್ವ ಸಾರಿದ ಪ್ರವಾದಿಯಾಗಿ ಹಾಗೂ ಉನ್ನತ ಆಧ್ಯಾತ್ಮ ವಿಚಾರಗಳನ್ನು ಪ್ರತಿಪಾದಿಸಿದ ದಾರ್ಶನಿಕರಾಗಿ ಅವರು ಲೋಕಕ್ಕೆ ಸಲ್ಲಿಸಿದ ಅನನ್ಯ ಮಾರ್ಗಸೂಚಿ ಕಾರ್ಯಗಳು ಎಲ್ಲಾ ಕಾಲಕ್ಕೂ ಮತ್ತು ಎಲ್ಲರಿಗೂ ಅನುಕರಣೀಯ ಎನಿಸಿಕೊಂಡಿರುವುದನ್ನು ಯಾರೂ ಮರೆಯಲಾಗದ ಸಂಗತಿಗಳಾಗಿದೆ.

***ಅರಿಯಲಿಲ್ಲದ ಅರಿವು ಅವಗ್ರಹಿಸಿತ್ತಾಗಿ***
***ಅರಿಯಲಿಲ್ಲದ ಮರೆಯಲಿಲ್ಲದ ನಿಜವು ನಿಂದಿತ್ತಾಗಿ***
***ನಿರ್ನಾಮವಾಯಿತು, ನಿಃಷ್ಪತ್ತಿಯಾಗಿತ್ತು***
***ಅಗಮ್ಯದಲ್ಲಿ ಗಮನ ಕೆಟ್ಟಿತ್ತು, ನಿಂದಲ್ಲಿ ನಿರಾಳವಾಯಿತು***
***ಕೂಡಲಸಂಗಮನಲ್ಲಿ ಶಬ್ಧಮುಗ್ಧವಾಯಿತ್ತು***

ಬದುಕಿನಲ್ಲಿ ನಾವು ಕಾಣಬೇಕಾದ ಪರಮ ಸತ್ಯವನ್ನು ನಾವು ನಮ್ಮ ಮನಸ್ಸಿನ ಮೂರು ಅವಸ್ಥೆಗಳಾದ ಜಾಗೃತ್-ಸ್ವಪ್ನ-ಸುಷುಪ್ತಿಗಳಲ್ಲಿಯೂ ನೆನೆಯಬೇಕು. ನಮ್ಮ ಮನದ ಒಳಹೊರಗೂ ಸದಾ ಪರಮಾತ್ಮನ ಅನನ್ಯ ಚಿಂತನೆ ಸಾಗಬೇಕು. ಇಷ್ಟಲಿಂಗ ಯೋಗದಲ್ಲಿ ಮನಸ್ಸನ್ನು ತನ್ಮಯಗೊಳಿಸಿಕೊಳ್ಳುವುದರ ಮೂಲಕ ಮನಸ್ಸಿನ ಚಿತ್ತ ವೃತ್ತಿಗಳನ್ನು ಕಳೆದುಕೊಂಡಾಗ ಮಾತ್ರ ಪರಮಾತ್ಮ ತತ್ತ್ವದ ಅರಿವು ಕಾಣಲು ಸಾಧ್ಯ ಎನ್ನುವಂತಹ ವಿಚಾರಧಾರೆ





ಗುರು ಬಸವಣ್ಣನವರದು. ನಾವು ಬದುಕಿನಲ್ಲಿ ಏನನ್ನಾದರೂ ಸಾಧಿಸಬಹುದು, ಆದರೆ ನಾ ಯಾರೆಂಬ ನಿಜ ಜ್ಞಾನದ ಸಾಕ್ಷಾತ್ಕಾರ ಪಡೆಯುವುದು ಮಾತ್ರ ಕಷ್ಟಸಾಧ್ಯವಾಗಿದ್ದು ಅದನ್ನು ಕಾಣುವುದೇ ಬದುಕಿನ ಪರಮ ಸಾರ್ಥಕತೆಯ ಸಾಧನೆಯಾಗಿದೆ.

ಪರಮಾತ್ಮ ಇಡೀ ವಿಶ್ವವನ್ನು ಒಂದು ಯೋಗ ಸೂತ್ರದಡಿಯಲ್ಲಿ ಬಂಧಿಸಿದ್ದಾನೆ. ಇಡೀ ವಿಶ್ವವೇ ಪರಮಾತ್ಮನ ನಿರ್ದೇಶನದಂತೆ ಸಾಗುತ್ತಿದೆ. ಅಂತಹ ಪರಮಸತ್ಯವಾದ ಪರಮಾತ್ಮ ತತ್ತ್ವದ ಅಗಮ್ಯ ಶಕ್ತಿಯಲ್ಲಿ ನಮ್ಮ ಚಿತ್ತವೃತ್ತಿಯ ಭಾವಗಳು ನಿರ್ಭಾವವಾಗಿ ನಿಷ್ಪತ್ತಿ ಹೊಂದಿದಾಗ ಕಾಣುವುದೇ ನಿಜಲಿಂಗೈಕ್ಯ ಸ್ಥಿತಿಯಾಗಿದೆ. ಆ ದಿವ್ಯ ಉದ್ದೇಶದತ್ತ ನಮ್ಮನ್ನು ಕರೆದೊಯ್ಯುವ ಆಶಯ ಗುರು ಬಸವಣ್ಣನವರು ಪ್ರತಿಪಾದಿಸಿದ ಇಷ್ಟಲಿಂಗ ಯೋಗ ಸೂತ್ರದ ಸಂದೇಶ ವಚನಗಳಲ್ಲಿ ನಾವು ಕಾಣಬಹುದು.

ಗುರು ಬಸವಣ್ಣನವರು ಬದುಕನ್ನು ಒಂದು ಯೋಗದಂತೆ ಕಂಡವರು. ಅವರು ತಮ್ಮೆಲ್ಲಾ ಕೆಲಸ ಕಾರ್ಯಗಳನ್ನು ನಿರ್ಲಿಪ್ತರಾಗಿ ನಿರ್ವಹಿಸಿದರು. ಅದರೊಳಗೆಯೇ ಅವರು ಪರಮಾತ್ಮ ತತ್ತ್ವದ ಆನಂದವನ್ನು ಸಹ ಕಂಡರು. ಸಾರ್ಥಕ ಬದುಕಿಗೆ ಅವಶ್ಯಕವಾದ ಸಂಸ್ಕಾರದ ಶಿಕ್ಷಣವನ್ನು ಅವರು ಎಲ್ಲರಿಗೂ ನೀಡಿದರು. ಭಕ್ತಿಪಂಜರ (ಪಥ)ದ ಮೂಲಕ ಅವರು ಎಲ್ಲರನ್ನೂ ಬಂಧಿಸಿದ್ದು ಅವರ ಸಾಧನೆಯ ಒಂದು ವಿಶೇಷ ನೋಟ ಎನ್ನಬಹುದಾಗಿದೆ. ಅವರು ಈ ಇಳೆಯ ಸಾರ್ಥಕ ಬದುಕನ್ನು ಪೂರೈಸಿ ಇಷ್ಟಲಿಂಗ ತಾಟಕ ಯೋಗದ ಮೂಲಕ ಇಚ್ಛಾಮರಣಿಗಳಾಗಿ ಪರಮಾತ್ಮ ತತ್ತ್ವದ ಜ್ಞಾನದ ಬೆಳಕಿನಲ್ಲಿ ಸಮರಸಗೊಂಡ ಶ್ರಾವಣ ಪಂಚಮಿಯ ದಿನವನ್ನು ಬಸವಪಂಚಮಿ ಎಂದು ರಾಷ್ಟ್ರದ್ಯಂತ ಆಚರಿಸಿಕೊಂಡು ಬರಲಾಗುತ್ತಿದೆ. ಅವರ ೮೨೧ನೇ ಲಿಂಗೈಕ್ಯ ಸಂಸ್ಮರಣೆಯ (ಬಸವ ಪಂಚಮಿ) ಆಚರಣೆಯ ಸಂದರ್ಭದಲ್ಲಿ ನಾವುಗಳು ಅವರು ತೋರಿದ ಸಂದೇಶದ ಮಾರ್ಗದಲ್ಲಿ ಸಾಗಬೇಕು. ಹಾಗೆಯೇ ಪರಮಾತ್ಮ ತತ್ತ್ವದರಿವನ್ನು ಕಾಣುವ ಪ್ರಾಮಾಣಿಕ ಪ್ರಯತ್ನ ನಾವು ಮಾಡಬೇಕು.



# ಬಸವನ ನೆನೆದರೆ ಮಾನವ ಜೀವನ ಪಾವನ

ಬಸವನ ನೆನೆದರೆ ಬೇಸರ ಹೋದಿತು
ಬಸವನ ನೆನೆದರೆ ಬದುಕು ಹಸನಾದಿತು
ಬಸವನ ನೆನೆದರೆ ಮಾನವ ಜೀವನ ಪಾವನ ಆದಿತು
ಬಸವನ ನೆನೆದರೆ ಆಯುಷ್ಯ ಹೆಚ್ಚಿತು ॥ ೧ ॥

ಇಂಗಳೇಶ್ವರದಲ್ಲಿ ಜನಿಸಿದ ಬಸವಣ್ಣ
ಭಕ್ತಿಯ ಕಿರಣ ಬಾಗೆವಾಡಿ ಬಸವಣ್ಣ
ಶಕ್ತಿಯ ಹೊಸ ಬೆಳಕು,
ಕಲ್ಯಾಣ ಜ್ಞಾನ ಭಂಡಾರಿ ಬಸವಣ್ಣ
ಅನುಭಾವ ಮಂಟಪದ ಕೀರ್ತಿ ಕಳಸ ಬಸವಣ್ಣ ॥ ೨ ॥

ಬಸವನ ಮನವೆಂಬ ಮಂದಿರದೊಳಗೆ
ತುಂಬಿಹುದು ವಚನದ ಅಮೃತ ಜಲಧಾರೆ
ಅರಿವೆಂಬ ಆತ್ಮಸುಜ್ಞಾನ ಜ್ಯೋತಿಯು
ನಾ ನೀನೆಂಬ ಅರಿವ, ಅರಿತುಬಾಳು
ಎಂದ ಬಸವಣ್ಣ ॥ ೩ ॥

ನಡೆ ನುಡಿ ಒಂದಾದುದೆ ದೇವಲೋಕ
ಸರ್ವರೊಳಗೆ ತಾನೊಬ್ಬನೆ ಕಿರಿಯನೆಂದ
ಮಾನವರೆಲ್ಲ ಒಂದೆ ಶಿವನೆ ನಮ್ಮ ನಿಮ್ಮೆಲ್ಲರ ತಂದೆ
ಎಂದನಾ ಕಾಶಿಘನ ಪಂಡಿತ
ಸದ್ಗುರು ವಿಶ್ವಾರಾಧ್ಯ ॥ ೪ ॥

– ಎಸ್. ಏಳುಭಾವೆಪ್ಪಗೌಡ ಗಬ್ಬೂರು
ದೇವದುರ್ಗ ತಾ., ರಾಯಚೂರು ಜಿ.

ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೮೨೮. | ಶ್ರೀ ಬಿ. ರಡ್ಡಣ್ಣನವರ<br>ಕಾಕೋಳ್ | ೧,೦೦೦.೦೦ |
| ೧೮೨೯. | ಶ್ರೀ ಮಾಲತೇಶ ವೆಂಕಪ್ಪ ಮಣಕೂರು<br>ಕುಪ್ಪೀಸ್ | ೧,೦೦೦.೦೦ |
| ೧೮೩೦. | ಶ್ರೀ ಬಸವರಾಜ್ ಜಿ. ಗುಬ್ಬರ್<br>ಸುಣಕಲ್‌ಬಿದರೆ | ೧,೦೦೦.೦೦ |
| ೧೮೩೧. | ಶ್ರೀ ಅಶೋಕ ಪಿ. ಲಾಲಗಿ<br>ಶೋಂಸಿ | ೧,೦೦೦.೦೦ |
| ೧೮೩೨. | ಶ್ರೀ ಮೋಹನ್ ಬಿ. ಮಸ್ತಿ<br>ಮೊರಬ್ | ೧,೫೦೦.೦೦ |
| ೧೮೩೩. | ಶ್ರೀ ಮೇಲೇಶ್ ಪ್ರೈ ಲಿ.,<br>ಬೆಂಗಳೂರು | ೫,೦೦೦.೦೦ |
| ೧೮೩೪. | ಶ್ರೀ ಕೆ.ಸಿ. ಹಿರೇಮಠ<br>ಅಲಮೇಲ್ | ೧,೦೦೦.೦೦ |
| ೧೮೩೫. | ಶ್ರೀ ರಾಥೋಡ್<br>ಮುಧೋಳ್ | ೧,೦೦೦.೦೦ |
| ೧೮೩೬. | ಶ್ರೀ ಜಿ.ಆರ್. ನಾಯ್ಕ<br>ಮುಧೋಳ್ | ೨,೦೦೦.೦೦ |
| ೧೮೩೭. | ಶ್ರೀ ಕುಮಾರ್‌ಸಿನೋ ಸೋಲಗಿ<br>ಬಸವನಬಾಗೇವಾಡಿ | ೨,೦೦೦.೦೦ |
| ೧೮೩೮. | ಶ್ರೀ ಶಂಕರಪ್ಪ ಗೋಲಪ್ಪನವರ<br>ಹುಬ್ಬಳ್ಳಿ | ೧೦,೦೦೦.೦೦ |
| ೧೮೩೯. | ಶ್ರೀ ಪ್ರಭು ಬಿ. ದಂಡವತಿಮಠ<br>ಗದಗ್ | ೧೦,೦೦೦.೦೦ |
| ೧೮೪೦. | ಶ್ರೀ ಎನ್.ಜಿ. ಗೋನ್‌ವಾಕರ್<br>ಹುಬ್ಬಳ್ಳಿ | ೧,೦೦೦.೦೦ |
| ೧೮೪೧. | ಶ್ರೀ ಅಸಿತೋಖಾನ್ ಶಿವಳ್ಳಿ<br>ಹುಬ್ಬಳ್ಳಿ | ೧,೦೦೦.೦೦ |
| ೧೮೪೨. | ಶ್ರೀ ಶಿವಕುಮಾರಮಠ<br>ದೂಪದಾಳ್ | ೫,೦೦೦.೦೦ |
| ೧೮೪೩. | ಶ್ರೀ ಆರ್.ವೈ. ಕೊಟ್ಲಮರಿ<br>ಗದಗ್ | ೭,೫೦೦.೦೦ |
| ೧೮೪೪. | ಶ್ರೀ ಆರ್.ಎಸ್. ಮುಟೊಗಿ<br>ಹುಬ್ಬಳ್ಳಿ | ೨,೦೦೦.೦೦ |
| ೧೮೪೫. | ಶ್ರೀ ಬಿ. ಗೋವಿಂದ್ರೆದಾರ್<br>ಮಲೋನಾಯಕನಹಳ್ಳಿ | ೫,೦೦೧.೦೦ |
| ೧೮೪೬. | ಶ್ರೀ ಹಾಲೇಶ ರೆಡ್ಡಾರ್<br>ಮಲೋನಾಯಕನಹಳ್ಳಿ | ೧,೦೦೦.೦೦ |
| ೧೮೪೭. | ಶ್ರೀ ಕುಮಾರ ಕಿರಸೋಲಗಿ<br>ಬಸವನಬಾಗೇವಾಡಿ | ೨,೦೦೦.೦೦ |
| ೧೮೪೮. | ಶ್ರೀ ವಿಜಯಕುಮಾರ್<br>ಹುಬ್ಬಳ್ಳಿ | ೧,೦೦೦.೦೦ |
| ೧೮೪೯. | ಶ್ರೀ ಟಿ.ಬಿ. ಮೋಹಿತೆ<br>ಸಾಂಗಲಿ | ೧,೦೦೦.೦೦ |
| ೧೮೫೦. | ಶ್ರೀ ಆರ್.ಎಂ.ಹಳ್ಳಿಕೆರೆ<br>ಅಂಚಟಗೆರೆ | ೧,೦೦೦.೦೦ |
| ೧೮೫೧. | ಶ್ರೀ ಮಹಬೂಬ್‌ಸಾಬ್ ಗಡದೆ<br>ಕೊರಡಿಕೊಪ್ಪ | ೧,೦೦೦.೦೦ |
| ೧೮೫೨. | ಶ್ರೀ ನವೀನ್ ರವಿ<br>ಬ್ಯಾರಟ್ಟಿ | ೧,೦೦೦.೦೦ |
| ೧೮೫೩. | ಶ್ರೀ ವಿ.ಕೆ. ಮರಳಿಹಳ್ಳಿ<br>ಗೋಪಾಲಪುರ | ೧,೦೦೦.೦೦ |
| ೧೮೫೪. | ಶ್ರೀ ಹೇಮರೆಡ್ಡಿ ಬಿ. ಗೋವಿಂದರೆಡ್ಡಿ<br>ಮಲೋನಾಯಕನಹಳ್ಳಿ | ೨,೦೦೦.೦೦ |
| ೧೮೫೫. | ಶ್ರೀ ಮಂಜುನಾಥ ಆರ್. ಚುಲಕಿ<br>ಕೊರಿಯವಾಡ್ | ೧,೦೦೦.೦೦ |
| ೧೮೫೬. | ಶ್ರೀ ಶಮಂತ ಬಿ. ಮಳಿಮಠ<br>ರಾಣೆಬೆನ್ನೂರು | ೧,೦೦೦.೦೦ |
| ೧೮೫೭. | ಶ್ರೀ ಶೃತಿ ಬಿ. ಮಳಿಮಠ<br>ರಾಣೆಬೆನ್ನೂರು | ೧,೦೦೦.೦೦ |
| ೧೮೫೮. | ಶ್ರೀ ದತ್ತಾತ್ರೇಯ ಎಸ್. ಭಟ್ಟ<br>ಮಣ್‌ಮನೆ | ೧,೦೦೦.೦೦ |
| ೧೮೫೯. | ಶ್ರೀ ತ್ರಿವೇಣಿ ಡಿ. ಭಟ್ಟ<br>ಮಣ್‌ಮನೆ | ೧,೦೦೦.೦೦ |
| ೧೮೬೦. | ಶ್ರೀ ಪೂಜಾ ಡಿ. ಭಟ್ಟ<br>ಮಣ್‌ಮನೆ | ೧,೦೦೦.೦೦ |
| ೧೮೬೧. | ಶ್ರೀ ರೋಮೋ ಭಟ್ಟ<br>ಮಣ್‌ಮನೆ | ೧,೦೦೦.೦೦ |
| ೧೮೬೨. | ಶ್ರೀ ಎಲ್. ಶಿವಯ್ಯ, ನಿ.ಮು.ಶಿ.<br>ಬೆಣಚಗೆರೆ | ೧೦,೦೦೧.೦೦ |
| ೧೮೬೩. | ಶ್ರೀ ಕೆ.ವಿ. ಮಹೇಶ್<br>ಬಡವನಹಳ್ಳಿ | ೨,೦೦೦.೦೦ |
| ೧೮೬೪. | ಶ್ರೀ ಬಿ.ಎಸ್. ಅಗಡಿ<br>ತಿಪಟೂರು | ೨,೦೦೨.೦೦ |

*(ಮುಂದುವರೆಯುತ್ತದೆ)*

RNI No. 17139/69 "Siddaganga" Monthly - Postal Reg. No. L2/RNP/385/TMR/2015-17



ಪರಮಪೂಜ್ಯ ಶ್ರೀ ಶ್ರೀಗಳವರಿಂದ ತುಮಕೂರಿನಲ್ಲಿ ನಡೆದ ಜಿಲ್ಲಾಮಟ್ಟದ ಅಥ್ಲೆಟಿಕ್ಸ್ ಕ್ರೀಡಾ ಸ್ಪರ್ಧೆಯಲ್ಲಿ ವಿಜೇತರಾಗಿ, ರಾಜ್ಯಮಟ್ಟಕ್ಕೆ ಆಯ್ಕೆಯಾದ ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢ ಶಾಲೆಯ ವಿದ್ಯಾರ್ಥಿಗಳು ಹಾಗೂ ಮುಖ್ಯಶಿಕ್ಷಕರು, ದೈಹಿಕ ಶಿಕ್ಷಕರು ಆಶೀರ್ವಾದ ಪಡೆದರು.



ಬಿ.ಜಿ.ಎಸ್. ಆಸ್ಪತ್ರೆಯಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಚಿಕಿತ್ಸೆ ನೀಡಿದ ಬಿ.ಜಿ.ಎಸ್. ಆಸ್ಪತ್ರೆಯ ವೈದ್ಯರು ಹಾಗೂ ಸಿಬ್ಬಂದಿ ವರ್ಗ





ಶಿವಗಂಗಾ ಕ್ಷೇತ್ರದ ಶ್ರೀ ಮೇಲಣಗವಿ ಮಠದಲ್ಲಿ ಮಕ್ಕಳಾರತಿ ಬಸವೇಶ್ವರ ದೇವಾಲಯದ ಪುನರ್ ಪ್ರತಿಷ್ಠಾಪನೆ ಹಾಗೂ ದೇವಾಲಯದ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ರಂಭಾಪುರಿ ಜಗದ್ಗುರು ಶ್ರೀ ಶ್ರೀ ಪ್ರಸನ್ನ ರೇಣುಕ ವೀರಸೋಮೇಶ್ವರ ಶಿವಾಚಾರ್ಯ ಸ್ವಾಮಿಗಳು, ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಹಾಗೂ ವಿವಿಧ ಮಠಾಧಿಪತಿಗಳು ಉಪಸ್ಥಿತರಿದ್ದರು.



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಬಿ.ಜಿ.ಎಸ್. ಆಸ್ಪತ್ರೆಯಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಚಿಕಿತ್ಸೆ ನೀಡಿದ ವೈದ್ಯರನ್ನು ಗೌರವಿಸುತ್ತಿರುವುದು.




ತುಮಕೂರಿನ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಸ್ವಾತಂತ್ರ್ಯೋತ್ಸವದ ಪಥಸಂಚಲನದಲ್ಲಿ ಭಾಗವಹಿಸಿ ಪ್ರಥಮ ಸ್ಥಾನ ಪಡೆದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಉನ್ನತ ಪ್ರೌಢಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಆಶೀರ್ವಾದ ಪಡೆದರು.